# ಹಂಪೆಯ ವಿರೂಪಾಕ್ಷೇಶ್ವರ ವಚನಗಳು

ಪ್ರೊ. ಬಿ. ವಿರೂಪಾಕ್ಷಪ್ಪ

ನವೋದಯ ಪ್ರಕಾಶನ
ಬೆಂಗಳೂರು-೫೬೦ ೦೪೦

*HAMPEYA VIRUPAKSHESHSWARA VACHANAGALU* - Written and Published by : Prof. B. Virupakshappa, Navodaya Prakashana, No. 5, 'Chethana' 1st 'C' Main, Vijayanagar IInd Stage, Bangalore-560040.

ಪುಟಗಳು : X+೧೩೩

ಮೊದಲ ಮುದ್ರಣ : ೨೦೦೧

ಬೆಲೆ : ರೂ. ೬೦/-

ಛಾಯಾಕ್ಷರ ಜೋಡಣೆ:
**ವರ್ಷಿಣಿ ಗ್ರಾಫಿಕ್ಸ್**, ಬೆಂಗಳೂರು-560 040 ☎ : 3402575

ಮುದ್ರಕರು:
**ಸ್ನೇಹಾ ಪ್ರಿಂಟರ್ಸ್**
ನಂ. 114, 4ನೇ ಅಡ್ಡರಸ್ತೆ, ಬಿ.ಸಿ.ಸಿ. ಬಡಾವಣೆ
ಅತ್ತಿಗುಪ್ಪೆ, ವಿಜಯನಗರ 2ನೇ ಹಂತ, ಬೆಂಗಳೂರು-40. ☎ : 3302417
E-Mail-snehaprints@usa.net

# ಮುನ್ನುಡಿ

ವಚನ ವಾಙ್ಮಯವು ಉಗಮ, ಉಚ್ಛ್ರಾಯ, ಪುನರುತ್ಥಾನ ಮೊದಲಾದ ಮಜಲುಗಳನ್ನೇರಿ, ಇಂದು ತನ್ನ ವಿಖ್ಯಾತಿಯ ಉತ್ತುಂಗ ಶೃಂಗದ ಮೇಲೆ ತನ್ನ ವೈಜಯಂತಿಯನ್ನು ಹಾರಬಿಟ್ಟಿದೆ. ದೈವಭಕ್ತಿ, ಛಂದೋ-ಮುಕ್ತಿ, ಆತ್ಮ, ಆಧ್ಯಾತ್ಮ, ಶೋಷಣೆ ನಿವಾರಣೆ, ಸಮಾಜ ಸುಧಾರಣೆ, ವ್ಯಕ್ತಿ ಶುದ್ಧೀಕರಣ -ಇವೇ ಮೊದಲಾದುವನ್ನು ತನ್ನ ವಸ್ತುಗಳನ್ನಾಗಿಸಿಕೊಂಡು ಬೆಳೆದ ವಚನ ಸಾಹಿತ್ಯ ಇಂದು ವೈಜ್ಞಾನಿಕ ಭಾವ-ಭಣಿತೆಗಳನ್ನು ಸೃಷ್ಟಿಸಿಕೊಂಡು ಸರ್ವಾಂಗ ಸುಂದರವೂ ಸರ್ವಾದರಣೀಯವೂ ಆಗಿ ಮೆರೆಯುತ್ತಿದೆ. ಇದಕ್ಕೆ ವಿಜ್ಞಾನ ಪ್ರತಿಮೆಗಳ ಹೊಸ ಆಯಾಮವಿತ್ತ ಕೀರ್ತಿ ವಿಜ್ಞಾನಿ, ತತ್ತ್ವಜ್ಞಾನಿ, ದಾರ್ಶನಿಕ ಕವಿ ಪ್ರೊ. ಬಿ. ವಿರೂಪಾಕ್ಷಪ್ಪ ನವರಿಗೆ ಸಲ್ಲುತ್ತದೆ. ವಿಜ್ಞಾನ ಸಮೀಕರಣ ಇವರ ವಚನ ರಚನೆಯ ವೈಶಿಷ್ಟ್ಯವಾಗಿದೆ. ಅದನ್ನೇ ತಮ್ಮ ಅಭಿವ್ಯಕ್ತಿಯ ಸ್ಥಾಯಿಯನ್ನಾಗಿಸಿಕೊಂಡಿದ್ದಾರೆ. ಶರೀರ ವಿಜ್ಞಾನ, ಖಗೋಳ ವಿಜ್ಞಾನ, ಅಣುವಿಜ್ಞಾನ, ಮನೋವಿಜ್ಞಾನ, ಮಾನವಿಕ ವಿಜ್ಞಾನ, ಕೃಷಿ, ಭಾಷೆ ಮೊದಲಾದ ಎಲ್ಲ ವಿಶೇಷಗಳ ದ್ರುವೀಕರಣ ಕಾರ್ಯ ಇಲ್ಲಿನ ವಚನಗಳಲ್ಲಿ ನಡೆದಿದೆ. ಬಹುತೇಕ ವಚನಗಳಲ್ಲಿ ವಿಜ್ಞಾನ ಪ್ರತಿಮೆಗಳು, ದೃಷ್ಟಾಂತಗಳು ಆನಂದ ನರ್ತನಗೈದಿವೆ. ಒಂದು ಉದಾಹರಣೆ:

ಪರಮಾಣು ಕೇಂದ್ರದಲ್ಲಿ ಪ್ರೊಟಾನ್ ನ್ಯೂಟ್ರಾನ್ ಕಣಗಳು
ಇದು ಪರಮಾಣು ಬೀಜ
ಪ್ರೊಟಾನುಗಳ ಸಂಖ್ಯೆ ಬದಲಾದರೆ ಹೊಸ ಮೂಲಾಂಶ ರಚನೆ
ಕಬ್ಬಿಣದ ಪರಮಾಣುವಿನಲ್ಲಿ ಇಪ್ಪತ್ತಾರು ಪ್ರೊಟಾನುಗಳು
ಚಿನ್ನದಲ್ಲಿ ಇವುಗಳ ಸಂಖ್ಯೆ ಎಪ್ಪತ್ತೊಂಬತ್ತು
ಕಬ್ಬಿಣ ಚಿನ್ನವಾಗುವುದು ಬೀಜಕ್ರಿಯೆ
ಮಾನವ ದೇವನಾಗುವುದು ಅಧ್ಯಾತ್ಮಕ್ರಿಯೆ
ಅಧ್ಯಾತ್ಮಕ್ರಿಯೆ ನಡೆಯಲಿ
ಮಾನವ ದೇವನಾಗಲಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

ಈ ಬಗೆಯ ವಿಜ್ಞಾನ ಮತ್ತು ಅಧ್ಯಾತ್ಮಗಳ ಬೆಸುಗೆ ಬಿ. ವಿರೂಪಾಕ್ಷಪ್ಪನವರಂತಹ ಚಿನ್ನಗೆಯ್ಕರಿಗೆ ಮಾತ್ರ ಸಾಧ್ಯವಾಗಿದೆ. ಅದರಿಂದಾಗಿ ಶ್ರೀಯುತರು ಏಕಮೇವಾದ್ವಿತೀಯ 'ವೈಜ್ಞಾನಿಕ ವಚನಕಾರ' ಎಂದು ಘೋಷಿಸಲು ಹರ್ಷಿಸುತ್ತೇನೆ.

ದ್ವಯದಲ್ಲಿ ಅದ್ವಯವನ್ನು, ದ್ವೈತಭಾವದಲ್ಲಿ ಅದ್ವೈತ ದರ್ಶನವನ್ನು ಸಾಧಿಸಿ ತೋರಿಸುವ ಸಾಹಸ ಕಾರ್ಯ ಇಲ್ಲಿನ ವಚನಗಳಲ್ಲಿ ನಡೆದಿದೆ. ಕಲೆ-ವಿಜ್ಞಾನ, ಪೂರ್ವ-ಪಶ್ಚಿಮ, ಲೌಕಿಕ-ಪಾರಮಾರ್ಥ, ದ್ಯಾವಾ-ಪೃಥಿವಿ, ಶಿಕ್ಷಣ-ಶೋಷಣೆ, ಮತ-ಧರ್ಮ, ಪ್ರಕೃತಿ-ವಿಕೃತಿ, ಪಿಂಡಾಂಡ-ಬ್ರಹ್ಮಾಂಡ, ಸಂಸ್ಕೃತಿ-ನಾಗರಿಕತೆ, ಹೆಣ್ಣು-ಗಂಡು, ಆತ್ಮ-ಪರಮಾತ್ಮ, ಉರಿ-ಸಿರಿ, ಮೂಢನಂಬಿಕೆ-ವೈಜ್ಞಾನಿಕ ದೃಷ್ಟಿ, ವೈಚಾರಿಕತೆ-ಸಂಪ್ರದಾಯ, ಸಿದ್ಧಾಂತ-ಅನುಭಾವ -ಇವೇ ಮೊದಲಾದ ವಿರುದ್ಧ ಗುಣಗಳ ಸುಂದರ ಸಮನ್ವಯತೆಯನ್ನು ವಿರೂಪಾಕ್ಷಪ್ಪನವರ 'ಹಂಪೆಯ ವಿರೂಪಾಕ್ಷೇಶ್ವರ ವಚನಗಳ'ಲ್ಲಿ ಕಾಣಬಹುದು.

ಲೌಕಿಕ ಸ್ತರದಲ್ಲಿ ನಿಂತು ವೀಕ್ಷಿಸಿದಾಗ ವೈಜ್ಞಾನಿಕ ವಚನಕಾರ ವಿರೂಪಾಕ್ಷಪ್ಪನವರ ಸದಾಶಯ ಶಿಖರಿ ನಮ್ಮನ್ನು ಬೆರಗುಗೊಳಿಸುತ್ತದೆ.

ನಾನೊಂದು ಕನಸು ಕಂಡೆ
ಮಾನವರು ಜಾತಿಭೇದ ಮರೆತು ಬಂಧುಗಳಾದುದ ಕಂಡೆ.
ರಾಜಕಾರಣಿಗಳು ಭ್ರಷ್ಟಾಚಾರವ ತೊರೆದು ನೀತಿವಂತರಾದುದ ಕಂಡೆ.
ವ್ಯಾಪಾರಿಗಳು ಕಲಬೆರಕೆ ಕಳ್ಳ ವ್ಯಾಪಾರ ಬಿಟ್ಟು
ಪ್ರಾಮಾಣಿಕರಾದುದ ಕಂಡೆ
ವಿಜ್ಞಾನಿಗಳು ವಿಧ್ವಂಸಕ ಶಸ್ತ್ರನೀತಿಯ ಬಿಟ್ಟು
ಮಾನವರಾದುದ ಕಂಡೆ.
ಶಿಕ್ಷಣ ಸಂಸ್ಥೆಗಳು ವ್ಯಾಪಾರೀಕರಣ ಬಿಟ್ಟು
ಶಾರದೆಯ ಉಪಾಸಕರಾದುದ ಕಂಡೆ.
ಶ್ರೀಮಂತರು ಬಂಡವಾಳಶಾಹಿತ್ವ ತೊರೆದು
ಬಡವರ ಟ್ರಸ್ಟಿಗಳಾದುದ ಕಂಡೆ.
ಮಠದ ಸ್ವಾಮಿಗಳು ಡಾಂಭಿಕತನಬಿಟ್ಟು
ಅನುಭಾವಿಗಳಾದುದ ಕಂಡೆ.
ವಿದ್ಯಾರ್ಥಿಗಳು ಟಿ.ವಿ. ಸಿನೆಮಾ ಮೋಹಬಿಟ್ಟು
ಸರಸ್ವತೀ ಪುತ್ರರಾದುದ ಕಂಡೆ.
ಈ ನನ್ನ ಕನಸು ನನಸಾಗುವಂತೆ ಮಾಡಯ್ಯಾ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

ಈ ವಚನಾಂತರ್ಯದ ಕವಿ ಕಳಕಳಿ ತುಂಬಾ ಶ್ಲಾಘನೀಯ. ಇಂಥದೇ ಕಳಕಳಿ ಮತ್ತೊಂದು ವಚನದಲ್ಲಿ ಅಭಿವ್ಯಕ್ತವಾಗಿದೆ. ಅದು ತನ್ನ ಮತಧರ್ಮ ವ್ಯಾಪ್ತಿಯಲ್ಲಿ ಬೆಳಕು ಕಾಣಿಸಲೆತ್ನಿಸಿದ್ದು.

ವೀರಶೈವ ಉಳಿಯಬೇಕಾದರೆ ಮಠಗಳೆಲ್ಲ ಒಂದಾಗಬೇಕು.
ಸ್ವಾಮಿಗಳೆಲ್ಲ ಒಂದಾಗಬೇಕು.
ಗುರುವಿರಕ್ತ ಭೇದಭಾವ ಅಳಿಯಬೇಕು
ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳು
ಗುರುವಿರಕ್ತರಿಗೆಲ್ಲ ಒಂದೇ,
ಇಷ್ಟದೈವ ಒಂದೇ.
ಅವನ ಕುರುಹು ಇಷ್ಟಲಿಂಗ ಒಂದೇ.
ಯೋಗ ಒಂದೇ ಎಲ್ಲರಿಗೂ, ಶಿವಯೋಗ.
ಗುರು ಲಿಂಗ ಜಂಗಮ ಕಾಯಕತತ್ವಗಳು
ಎಲ್ಲರಿಗೂ ಒಂದೇ.
ಎಲ್ಲರಿಗೂ ಗುರುವಿನ ಗುರು ಪರಶಿವ ಒಬ್ಬನೇ.
ಒಂದಾಗಬೇಕಲ್ಲರೂ ಈ ಗುರುವಿನಾಶ್ರಯದಲಿ
ಉಳಿಯಬೇಕು, ಬೆಳೆಸಬೇಕು ವಿಶ್ವಸಂಸ್ಕೃತಿಯ
ಇದರ ಬೆಳಕಿನಲಿ ಬೆಳಕ ಕಂಡು ಬದುಕುವಂತಾಗಲಯ್ಯಾ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

ಈ ವಚನದಲ್ಲಿ ಕವಿ ತಮ್ಮ ಹೃದಯವನ್ನೇ ತೆರೆದಿಟ್ಟಿದ್ದಾರೆ. ಹೆತ್ತ ತಾಯಿ ಮತ್ತು ಹೊತ್ತ ನೆಲಗಳೆರಡೂ ಪವಿತ್ರವಾದವು. ಅಷ್ಟೇ ಪವಿತ್ರ ಬದುಕು ಕೊಟ್ಟ ಭಾಷೆ, ಆತ್ಮವಿತ್ತ ಧರ್ಮ ಎರಡನ್ನು ಒಂದು ಮಾಡುವ ಪ್ರತಿಜ್ಞೆ ಸ್ವೀಕರಿಸಿದ ಈ ವೀರಶೈವ ಇಂದು ಒಡೆದು ಚೂರಾಗಿ ತನ್ನ ಗೋರಿಯನ್ನು ತಾನೇ ತೋಡಿಕೊಳ್ಳುತ್ತಿರುವುದು ನಿಜ್ಜಕೂ ಒಂದು ದೊಡ್ಡ ದುರಂತ. ಇದರ ನೆರಳಾದರೂ ಇಂದು ಕೆರಳಬೇಕಾಗಿದೆ!

ಇಂಥವೆನಿತೋ ಅಮೃತಸ್ಯಂದಿ ವಚನಗಳನ್ನಿತ್ತ ಕವಿ-ಸಾಹಿತಿ ಪ್ರೊ. ಬಿ. ವಿರೂಪಾಕ್ಷಪ್ಪನವರು ನಿಜಕ್ಕೂ ಅಭಿನಂದನಾರ್ಹರು.

'ರಾಗಿಣಿ' -ಸಾ.ಶಿ. ಮರುಳಯ್ಯ
ಬೆಂಗಳೂರು
೨೧-೧೨.೨೦೦೧

# ಅರಿಕೆ

೧೨ನೆಯ ಶತಮಾನದ ವಚನ ಸಾಹಿತ್ಯ ಅನುಭಾವ ಸಾಹಿತ್ಯ. ಆಗ ವಚನಕಾರರ ತಮ್ಮ ಆಧ್ಯಾತ್ಮಿಕ ಅನುಭವಗಳೇ ವಚನಗಳಾಗಿ ಮೂಡಿಬಂದವು. ಹಲವಾರು ಸಾಮಾಜಿಕ ಸಮಸ್ಯೆಗಳೂ ಇದರಲ್ಲಿ ಕಾಣಿಸಿಕೊಂಡರೂ ಅನುಭಾವವೇ ಅವುಗಳ ಮೂಲ ದ್ರವ್ಯವಾಗಿತ್ತು. ಈ ಮಾತು ೧೯ನೆಯ ಶತಮಾನದವರೆಗೆ ಮೂಡಿಬಂದ ವಚನಗಳೆಲ್ಲವಕ್ಕೂ ಅನ್ವಯಿಸುತ್ತದೆ.

೨೦ನೆಯ ಶತಮಾನದಲ್ಲಿ ವಚನಗಳ ರಚನೆ ವಿಪುಲವಾಗಿ ನಡೆದಿದೆ. ಈಗ ಸುಮಾರು ಇನ್ನೂರಕ್ಕಿಂತ ಹೆಚ್ಚು ವಚನಕಾರರು ಮೂವತ್ತು ಸಾವಿರಕ್ಕಿಂತಲೂ ಹೆಚ್ಚು ವಚನಗಳನ್ನು ರಚಿಸಿರುವರೆಂದು ತಿಳಿದುಬರುತ್ತದೆ. ಮೊದಮೊದಲು ಡಾ. ಜಚನಿ, ಮಹದೇವ ಬಣಕಾರ ಹಾಗೂ ಡಾ. ಸಿದ್ಧಯ್ಯಪುರಾಣಿಕ ಮುಂತಾದವರು ಹನ್ನೆರಡನೆಯ ಶತಮಾನದ ವಚನಕಾರರ ಚೌಕಟ್ಟಿನಲ್ಲಿಯೇ ಧಾರ್ಮಿಕ ವಿಷಯಗಳಿಗೆ ಸಂಬಂಧಪಟ್ಟಂತೆ ವಚನಗಳನ್ನು ರಚಿಸಲು ಪ್ರಾರಂಭಿಸಿದರೂ ಬರಬರುತ್ತ ಸಮಕಾಲೀನ ಜೀವನದ ಹಲವಾರು ಸಮಸ್ಯೆಗಳನ್ನು ಕುರಿತು ವಚನಗಳ ರಚನೆಯಾಗಿವೆ. ಒಟ್ಟಿನಲ್ಲಿ ವಚನ ರಚನೆ ಕೇವಲ ಒಂದು ವಿಷಯಕ್ಕೆ ಸೀಮಿತವಾಗದೆ ಹಲವಾರು ವಿಷಯಗಳ ವ್ಯಾಪ್ತಿಯನ್ನೊಳಗೊಂಡಿದೆ. ಕನ್ನಡದಲ್ಲಿ ಅದೊಂದು ಸಾಹಿತ್ಯ ಪ್ರಕಾರವಾಗಿ ಮೂಡಿಬಂದಿದೆ.

ಕನ್ನಡ ಹಾಗೂ ಇತರ ದೇಶೀಯ ಭಾಷೆಗಳಲ್ಲಿ ವಿಜ್ಞಾನದ ತಂತ್ರಜ್ಞಾನದಂಥ ವಿಷಯಗಳನ್ನು ಹೇಳುವುದು ಕಷ್ಟಸಾಧ್ಯವೆಂಬ ಅಭಿಪ್ರಾಯ ಒಂದು ಕಾಲಕ್ಕಿತ್ತು. ಇಪ್ಪತ್ತನೇ ಶತಮಾನದ ಆದಿಯಲ್ಲಿ ಹೈದ್ರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯ ಉರ್ದು ಭಾಷೆಯನ್ನು ಬೋಧನೆಯ ಮಾಧ್ಯಮವನ್ನಾಗಿ ಮಾಡಿ ವಿಜ್ಞಾನದ ವಿಷಯಗಳನ್ನು ಈ ಭಾಷೆಯಲ್ಲಿ ಯಶಸ್ವಿಯಾಗಿ ಬೋಧಿಸಿ ಈ ದಿಶೆಯಲ್ಲಿ ಒಂದು ಹೊಸ ಮಾರ್ಗಕ್ಕೆ ನಾಂದಿಯಾಯಿತು. ನಂತರ ನಾಗಪುರ ವಿಶ್ವವಿದ್ಯಾಲಯ ಹಿಂದಿ ಭಾಷೆಯಲ್ಲಿ, ಮೈಸೂರು ವಿಶ್ವವಿದ್ಯಾಲಯ ಕನ್ನಡದಲ್ಲಿ ಭಾಗಶಃ ವೈಜ್ಞಾನಿಕ ವಿಷಯಗಳನ್ನು

ಬೋಧಿಸುವುದನ್ನು ಜಾರಿಗೆ ತಂದಿತು. ಈಗ ವಿಜ್ಞಾನ ವಿಷಯಗಳನ್ನು ದೇಶೀಯ ಭಾಷೆಗಳಲ್ಲಿ ಅಭಿವ್ಯಕ್ತಿಗೊಳಿಸಬಹುದೆಂಬುದರ ಬಗೆಗೆ ಎರಡು ಮಾತಿಲ್ಲ.

ವೈಜ್ಞಾನಿಕ ವಿಷಯಗಳನ್ನು ಕವನ / ವಚನ ಮುಂತಾದ ಪ್ರಕಾರಗಳಲ್ಲಿ ಅಭಿವ್ಯಕ್ತಿಗೊಳಿಸಬಹುದೇ? ಎಂಬ ಪ್ರಶ್ನೆ ಏಳುತ್ತದೆ. ಡಿ.ವಿ. ಗುಂಡಪ್ಪನವರಂಥ ಕೆಲವು ಕವಿಗಳು ಡಾ. ಜಚನಿ, ಡಾ. ಸಿದ್ಧಯ್ಯ ಪುರಾಣಿಕರಂಥ ಕೆಲವು ವಚನಕಾರರು ವೈಜ್ಞಾನಿಕ ವಿಷಯಗಳನ್ನು ತಮ್ಮ ಕವನ / ವಚನಗಳಲ್ಲಿ ಅಲ್ಲಲ್ಲಿ ಅಭಿವ್ಯಕ್ತಿಗೊಳಿಸಿ ಮಾರ್ಗದರ್ಶಕರಾಗಿದ್ದಾರೆ. ಡಿ.ವಿ. ಗುಂಡಪ್ಪನವರ ಈ ಪದ್ಯವನ್ನು ಓದಿದಾಗ:

ಏನು ಭೈರವಲೀಲೆ ಯೀ ವಿಶ್ವವಿಭ್ರಮಣೆ।
ಏನು ಭೂತಗ್ರಾಮ ನರ್ತನೋನ್ಮಾದ॥
ಏನಗ್ನಿಗೋಳಗಳು ಏನಂತರಾಳಗಳು!
ಏನೀ ವಿಸ್ಮಯ ಸೃಷ್ಟಿ! - ಮಂಕುತಿಮ್ಮ.

ಇಂದಿನ ವಿಜ್ಞಾನ ಕಂಡುಹಿಡಿದಿರುವ ಅನೇಕ ವಿಸ್ಮಯಗಳನ್ನು ಬಹಳ ಪರಿಣಾಮಕಾರಿಯಾಗಿ ಪದ್ಯ ಅಥವಾ ವಚನ ರೂಪದಲ್ಲಿ ವ್ಯಕ್ತಗೊಳಿಸಬಹುದೆಂದು ನನಗನಿಸಿತು. ಈ ಅನಿಸಿಕೆ ಕೇವಲ ಅನಿಸಿಕೆಯಾಗಿಯೇ ಉಳಿಯಿತು. ಯಾಕೆಂದರೆ ನಾನು ಕವಿಯಾಗಿರಲೀ, ವಚನಕಾರನೂ ಆಗಿರಲಿಲ್ಲ.

ನಾನು ವಚನಕಾರನಾದದ್ದು ಒಂದು ಆಕಸ್ಮಿಕ. ನಾನು ಬಸವ ಪಥದ ಪ್ರಧಾನ ಸಂಪಾದಕನಾಗಿ ಬರೆದ ಸಂಪಾದಕೀಯಗಳು ಜನರ ಮೆಚ್ಚುಗೆ ಪಡೆದವು. ನಾನು ಅವುಗಳಲ್ಲಿ ಶರಣರ ಆಧ್ಯಾತ್ಮಿಕ ಮೌಲ್ಯಗಳನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿ ನಿರೂಪಿಸುತ್ತಿದ್ದುದು ಓದುಗರ ಗಮನ ಸೆಳೆಯಿತು.

ಮಾರ್ಚ್ ೨೦೦೦ದಲ್ಲಿ ಬಸವ ಸಮಿತಿಯು ಆಧುನಿಕ ವಚನ ಗೋಷ್ಠಿಯನ್ನು ಏರ್ಪಡಿಸಿತ್ತು. ಪ್ರಸಿದ್ಧ ಆಧುನಿಕ ವಚನಕಾರರಲ್ಲೊಬ್ಬರಾದ ಶ್ರೀ ಅನ್ನದಾನಯ್ಯ ಪುರಾಣಿಕರು ಆ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. ಗೋಷ್ಠಿಯಲ್ಲಿ ಉಪಸ್ಥಿತರಿದ್ದ ಮಿತ್ರರಾದ ಶ್ರೀ ಎಂ.ಜಿ. ನಾಗರಾಜ್‌ರವರು "ನೀವು ಚಿಂತನಶೀಲ ಸಂಪಾದಕೀಯಗಳನ್ನು ಬರೆಯುತ್ತಿರುವಿರಿ! ವಚನಗಳನ್ನೇಕೆ ರಚಿಸಿಲ್ಲ" ಎಂದು ಕೇಳಿದರು. ವಚನಗಳನ್ನು ಬರೆಯಬೇಕೆಂದು ನನಗೂ ಅನಿಸಿತು.

ಈ ಗೋಷ್ಠಿಯಲ್ಲಿ ಭಾಗವಹಿಸಿದ್ದ ತುಮಕೂರಿನ ಪ್ರೊ. ಬಿ. ವೀರಭದ್ರಯ್ಯನವರು ಇತ್ತೀಚೆಗೆ ವಿವಾದಕ್ಕೊಳಗಾದ "ವೀರಶೈವರು ಹಿಂದುಗಳೇ?" ಎಂಬ ವಿಷಯವನ್ನು ಕುರಿತು ವಚನವೊಂದನ್ನೋದಿದರು. ಅದಕ್ಕೆ ಉತ್ತರ ಕೊಡಬೇಕೆಂದು ನನಗನಿಸಿತು.

ನಾನು ಅದಕ್ಕೆ ಅಧ್ಯಕ್ಷರ ಅನುಮತಿ ಕೇಳಿದೆ. ನೀವು ಉತ್ತರ ಕೊಡುವುದಾದರೆ ವಚನ ರೂಪದಲ್ಲಿಯೇ ಕೊಡಬೇಕೆಂದರು. ತಕ್ಷಣವೇ ಅಲ್ಲಿಯೇ ಮೂರು ವಚನಗಳನ್ನು ರಚಿಸಿದೆ. ನನಗೆ ಕೂಡಲೇ ಹೊಳೆದ ಅಂಕಿತ "ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ". ಈ ಅಂಕಿತದೊಂದಿಗೆ ನಾನು ಈ ಕೆಳಗಿನ ವಚನಗಳನ್ನು ಓದಿ ಹೇಳಿದೆ:

೧

ಪರಮಾಣುವೆಂಬುದೊಂದು ಕಿಂಚಿತ್,
ಭೂಗ್ರಹವೆಂಬುದೊಂದು ಕಿಂಚಿತ್,
ನಕ್ಷತ್ರ ನೀಹಾರಿಕೆಗಳೆಂಬುದೊಂದು ಕಿಂಚಿತ್
ಅನಂತಕೋಟಿ ಬ್ರಹ್ಮಾಂಡಗಳೆಂಬುದೊಂದು ಕಿಂಚಿತ್
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ,
ನೀನೊಲಿದರೆ ಭವಸಾಗರವ ದಾಟುವದೊಂದು ಕಿಂಚಿತ್.

೨

"ವೀರಶೈವರು ಹಿಂದೂಗಳೇ?" ಎಂಬುದೊಂದು ಸಮಸ್ಯೆಯಯ್ಯ,
ಹಿಂದೂಗಳಾರೆಂಬುದನ್ನು ಮೊದಲು ತಿಳಿಯಬೇಕಯ್ಯ,
'ಹಿಂದೂ' ಎಂಬುದೊಂದು ಧರ್ಮಗಳ ಒಕ್ಕೂಟವಯ್ಯ,
ಅದೊಂದು ಧರ್ಮವಲ್ಲವಯ್ಯ,
ವೀರಶೈವವು ಹಿಂದೂ ಒಕ್ಕೂಟದ ಸ್ವತಂತ್ರ ಸದಸ್ಯನಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩

ನುಡಿದಂತೆ ನಡೆಯುವುದೇ ಜ್ಞಾನವಯ್ಯ,
ನುಡಿದಂತೆ ನಡೆಯದ ಪುಸ್ತಕಜ್ಞಾನ ಅಜ್ಞಾನವಯ್ಯ,
ನುಡಿದಂತೆ ನಡೆದು ಜ್ಞಾನಸಂಪನ್ನರಾಗಬೇಕಯ್ಯ,
ಇಂತಲ್ಲದವರನೊಲ್ಲ ನಮ್ಮ ಇಷ್ಟಲಿಂಗರೂಪಿ
ಹಂಪೆಯ ವಿರೂಪಾಕ್ಷೇಶ್ವರ.

ಇವುಗಳನ್ನು ಅಲ್ಲಿ ನೆರೆದಿದ್ದ ಸಭಿಕರು ಮೆಚ್ಚಿಕೊಂಡರು. ಹೀಗಾಗಿ ನಾನು ವಚನ ರಚನೆಯನ್ನು ಮುಂದುವರಿಸಿದೆ. ವೈಜ್ಞಾನಿಕ ವಿಷಯಗಳನ್ನು ವಚನ ರೂಪದಲ್ಲಿ ಅಭಿವ್ಯಕ್ತಿಗೊಳಿಸುವ ನನ್ನ ಹಂಬಲ ಗರಿಗೆದರಿತು. ಶರಣತತ್ತ್ವವನ್ನು ವೈಜ್ಞಾನಿಕ ಉಪಮಾಲಂಕಾರಗಳೊಂದಿಗೆ ಹೇಳುವುದೇ ಮುಖ್ಯ ಉದ್ದೇಶವಾದರೂ ಇಂದಿನ ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ದೇಶ, ನಾಡು-ನುಡಿ ಹಾಗೂ ಜನಜೀವನಕ್ಕೆ ಸಂಬಂಧಪಟ್ಟ

ವಿಷಯಗಳ ಬಗೆಗೆಯೂ ಈ ಮಾಧ್ಯಮದಲ್ಲಿ ನಾನು ಚಿಂತನೆಗೈದ ವಿಷಯಗಳನ್ನು ಅಭಿವ್ಯಕ್ತಿಗೊಳಿಸುವ ಅವಕಾಶ ಸಿಕ್ಕಿತು.

ಶರಣರು ಜನಜೀವನದ ಸಾಮಾನ್ಯ ಅನುಭವದ ವಿಷಯಗಳ ಉಪಮೆಗಳೊಂದಿಗೆ ಜನತೆಯ ಮನಸ್ಸನ್ನು ಅಧ್ಯಾತ್ಮದ ಕಡೆ ಸೆಳೆಯಲು ಪ್ರಯತ್ನಿಸಿದರು. ಇಲ್ಲಿ ನಾನು ವಿಜ್ಞಾನಕ್ಕೆ ಸಂಬಂಧಪಟ್ಟ ವಿಷಯಗಳ ಹೋಲಿಕೆಗಳೊಂದಿಗೆ ಜನರ ಗಮನವನ್ನು ಅಧ್ಯಾತ್ಮದತ್ತ ತಿರುಗಿಸಲು ಪ್ರಯತ್ನಿಸಿದ್ದೇನೆ. ಇದರಿಂದ ಎರಡು ಉದ್ದೇಶಗಳನ್ನಾಧರಿಸುವುದು ನನ್ನ ಮಹಿಚ್ಛೆಯಾಗಿದೆ. ವಿಜ್ಞಾನವನ್ನು ಕುರಿತು ಅಲ್ಪಸ್ವಲ್ಪ ಮಾಹಿತಿಯನ್ನು ಕೊಡುವುದು ಮೊದಲನೆಯ ಉದ್ದೇಶವಾದರೆ, ಆ ಮುಖಾಂತರ ಶರಣತತ್ವದ ಅಧ್ಯಾತ್ಮದತ್ತ ಅವರನ್ನು ಕೊಂಡೊಯ್ಯುವುದು ಎರಡನೆಯ ಪ್ರಮುಖ ಉದ್ದೇಶ. ಮೇಲ್ನೋಟಕ್ಕೆ ಹಲವಾರು ವಚನಗಳಲ್ಲಿ ವಿಜ್ಞಾನದ ವಿಷಯಗಳೇ ಕಂಡುಬಂದರೂ ಅಧ್ಯಾತ್ಮವೇ ಅವುಗಳ ಮೂಲ ದ್ರವ್ಯ. ಇದರಲ್ಲಿ ನಾನು ಎಷ್ಟರಮಟ್ಟಿಗೆ ಯಶಸ್ವಿಯಾಗಿರುವೆನೋ ಓದುಗರೇ ನಿರ್ಣಯಿಸಬೇಕು. ನನ್ನ ವಚನಗಳಲ್ಲಿ ಶರಣರ ವಚನಗಳ ಪ್ರಭಾವ ಎದ್ದು ಕಾಣುತ್ತದೆಂಬುದು ಓದುಗರ ಗಮನಕ್ಕೆ ಬಂದಿದೆ. ಇದನ್ನು ನನ್ನ ಗಮನಕ್ಕೆ ತರಲಾಗಿದೆ. ನಾನದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತೇನೆ.

ಬಸವ ಪಥದ ಹದಿನೈದು ಸಂಚಿಕೆಗಳಲ್ಲಿ ನನ್ನ ಸುಮಾರು ೩೦೦ ವಚನಗಳು ಪ್ರಕಟವಾಗಿವೆ. ಹಲವಾರು ಓದುಗರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ ನನ್ನ ಬೆನ್ನು ಚಪ್ಪರಿಸಿದ್ದಾರೆ. ಒಂದೆರಡು ತೆಗಳಿಕೆಯ ಪತ್ರಗಳೂ ಬಂದಿವೆ. ಒಬ್ಬರು ಕೀರ್ತಿ ವಾರ್ತೆಗಾಗಿ ನಾನು ವಚನಗಳನ್ನು ಬರೆಯುತ್ತಿದ್ದೇನೆಂದು ಹೇಳಿದ್ದಾರೆ. ಆದರೆ ನಾನು ವಚನಗಳನ್ನು ಬರೆದದ್ದು, ಬರೆಯುತ್ತಿರುವುದು ಕೀರ್ತಿ ವಾರ್ತೆಗಾಗಿ ಅಲ್ಲ, ಆತ್ಮತೃಪ್ತಿಗಾಗಿ. ಇವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಬೇಕೆಂದು ಕೆಲವು ಮಿತ್ರರು ನನಗೆ ಸಲಹೆ ಮಾಡಿದರು. ಈಗ ಪುಸ್ತಕ ರೂಪದಲ್ಲಿ ಅವುಗಳನ್ನು ಹೊರತಂದು ಅವರ ಸಲಹೆಗಳನ್ನು ಕಾರ್ಯಗತಗೊಳಿಸುತ್ತಿದ್ದೇನೆ. ಇದರಿಂದೇನಾದರೂ ಸಾಹಿತ್ಯ ಪ್ರಪಂಚಕ್ಕೆ ನನ್ನ ಅಳಿಲು ಸೇವೆ ಸಲ್ಲುವುದಾದರೆ ನಾನು ಧನ್ಯನೆಂದು ತಿಳಿದುಕೊಳ್ಳುತ್ತೇನೆ.

ನಾನು ಸತತವಾಗಿ ವಚನಗಳನ್ನು 'ಬಸವ ಪಥ'ದಲ್ಲಿ ಪ್ರಕಟ ಮಾಡಲು ಅವಕಾಶ ಮಾಡಿಕೊಟ್ಟ ಬಸವ ಸಮಿತಿಗೆ ಧನ್ಯವಾದಗಳನ್ನರ್ಪಿಸುತ್ತೇನೆ. ಯಾವಾಗಲೂ ನನಗೆ ಪ್ರೋತ್ಸಾಹ ಹಸ್ತವನೀಯುತ್ತ ಬಂದಿರುವ ಬಸವ ಸಮಿತಿಯ ಅಧ್ಯಕ್ಷರಾದ ಡಾ. ಬಿ.ಡಿ. ಜತ್ತಿಯವರಿಗೆ ನನ್ನ ಕೃತಜ್ಞತೆಗಳು. ಸಹಕಾರ ಹಸ್ತ ನೀಡಿದ ಪ್ರಧಾನ ಕಾರ್ಯದರ್ಶಿಗಳಾದ

ಶ್ರೀ ಎಚ್.ಎಸ್. ರೇಣುಕ ಪ್ರಸಾದ್, ಶ್ರೀ ಪ್ರಭುದೇವ ಜೆ. ಚಿಗಟೇರಿ ಮತ್ತು ಇತರ ಪದಾಧಿಕಾರಿಗಳಿಗೂ ಧನ್ಯವಾದಗಳನ್ನರ್ಪಿಸದಿರಲಾರೆ. ನನ್ನನ್ನು ಪ್ರೋತ್ಸಾಹಿಸಿ ಈ ಕೃತಿಯ ಪ್ರಕಟಣೆಗೆ ಕಾರಣರಾದ ಮಿತ್ರರಾದ ಡಾ. ವಿದ್ಯಾಶಂಕರರನ್ನು ನೆನೆಯದಿರಲಾರೆ. ಈ ಕೃತಿಗೆ ಅರ್ಥಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟ ಸಹೃದಯ ಸಾಹಿತಿಗಳಾದ ಡಾ. ಸಾ.ಶಿ. ಮರುಳಯ್ಯನವರಿಗೆ ಹೃತ್ಪೂರ್ವಕ ಧನ್ಯವಾದಗಳು. ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಸ್ನೇಹಾ ಪ್ರಿಂಟರ್ಸ್‌ರವರಿಗೂ ಧನ್ಯವಾದಗಳು.

ಚೇತನ
ವಿಜಯನಗರ, ಬೆಂಗಳೂರು-೪೦
ದಿ. ೩-೧೨-೨೦೦೧

-ಪ್ರೊ. ಬಿ. ವಿರೂಪಾಕ್ಷಪ್ಪ

# ಹಂಪೆಯ ವಿರೂಪಾಕ್ಷೇಶ್ವರ ವಚನಗಳು

೧

ಪರಮಾಣುವೆಂಬುದೊಂದು ಕಿಂಚಿತ್,
ಭೂಗ್ರಹವೆಂಬುದೊಂದು ಕಿಂಚಿತ್,
ನಕ್ಷತ್ರ ನೀಹಾರಿಕೆಗಳೆಂಬುದೊಂದು ಕಿಂಚಿತ್,
ಅನಂತಕೋಟಿ ಬ್ರಹ್ಮಾಂಡಗಳೆಂಬುದೊಂದು ಕಿಂಚಿತ್,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನೀನೊಲಿದರೆ ಭವಸಾಗರವ ದಾಟುವದೊಂದು ಕಿಂಚಿತ್.

೨

ವೀರಶೈವರು ಹಿಂದೂಗಳೇ? ಎಂಬುದೊಂದು ಸಮಸ್ಯೆಯಯ್ಯಾ.
ಹಿಂದುಗಳಾರೆಂಬುದ ಮೊದಲು ತಿಳಿಯಬೇಕಯ್ಯಾ,
ಹಿಂದೂ ಎಂಬುದೊಂದು ಧರ್ಮಗಳ ಒಕ್ಕೂಟವಯ್ಯಾ,
ಅದೊಂದು ಧರ್ಮವಲ್ಲವಯ್ಯ.
ವೀರಶೈವವು ಹಿಂದೂ ಒಕ್ಕೂಟದ ಸ್ವತಂತ್ರ ಸದಸ್ಯವಯ್ಯ
ಇಷ್ಟಲಿಂಗ ರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩

ನುಡಿದಂತೆ ನಡೆವುದೇ ಜ್ಞಾನವಯ್ಯ,
ನುಡಿದಂತೆ ನಡೆಯದ ಪುಸ್ತಕ ಜ್ಞಾನ ಅಜ್ಞಾನವಯ್ಯ.
ನುಡಿದಂತೆ ನಡೆದು ಜ್ಞಾನ ಸಂಪನ್ನರಾಗಬೇಕಯ್ಯ.
ಇಂಥಲ್ಲದವರನೊಲ್ಲ ನಮ್ಮ ಇಷ್ಟಲಿಂಗರೂಪಿ
ಹಂಪೆಯ ವಿರೂಪಾಕ್ಷೇಶ್ವರ.

೪

ಮಿದುಳೆ ಮನಸ್ಸಯ್ಯ, ಮನಸ್ಸು ಮಿದುಳಯ್ಯ,
ಇವೆರಡರಲ್ಲಿ ಅವಿನಾಭಾವ ಸಂಬಂಧವಯ್ಯ,

ಇವರಿಬ್ಬರ ಸಂಬಂಧ ದೀಪದೀಪ್ತಿಯ ಸಂಬಂಧವಯ್ಯ.
ಚಂದ್ರಬೆಳದಿಂಗಳ ಸಂಬಂಧವಯ್ಯ,
ಮಿದುಳಿನ ಕ್ರಿಯೆಗಳ ಸಾರ ಸರ್ವಸ್ವವೇ ಮನಸ್ಸಯ್ಯ.
ಮನಸ್ಸು ಅಘಟಿತಘಟನಾ ಸಾಧಕವಯ್ಯ.
ವಿಜ್ಞಾನ, ತತ್ವಜ್ಞಾನ, ಸಾಹಿತ್ಯ, ಸಂಗೀತ,
ಶಿಲ್ಪಕಲೆ, ಚಿತ್ರಕಲೆ, ಸಕಲಶಾಸ್ತ್ರಗಳು,
ವಿಶ್ವದ ಸಕಲ ವಿದ್ಯೆಗಳು ಇವರ ಸಾಧನೆಗಳಯ್ಯ.
ಮನಸ್ಸು ನಿನ್ನೊಳಗಾದರೆ, ನಾನು ನೀನಾಗುವೆನಯ್ಯ.
ನಾನು ನೀನಾಗುವಂತೆ ಕರುಣಿಸಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫

ಬಸವನಿಂದ ಹುಟ್ಟಿತ್ತು ಅನುಭಾವ,
ಬಸವನಿಂದಾಯಿತ್ತು ಕಾಯಕ ದಾಸೋಹ,
ಬಸವನಿಂದ ಪಸರಿಸಿತು ಅಧ್ಯಾತ್ಮಭಾವ,
ಬಸವನಿಂದಾಯಿತ್ತೀ ಲೋಕ ಶಿವಲೋಕ,
ಬಸವಕೃಪೆ ಎನಗಾಗುವಂತೆ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬

ಅಂದು ಭಸ್ಮಾಸುರ ತಪಗೈದು ವರಹಸ್ತಪಡೆದ,
ತನಗಾಗದವರನ್ನು ದಹಿಸಲು.
ಮದಹಂಕಾರದಿಂದ ತಾನೇ ದಗ್ಧನಾಗಿ ಹೋದ.
ಇಂದು ಕುಹಕರಾಜಕಾರಣಿ ತಂತ್ರಜ್ಞಾನಿಗಳು
ಪಡೆದರು ಹೈಡ್ರೋಜನ್ ಬಾಂಬು.
ಇದು ಶಿವನ ಹಣೆಗಣ್ಣು,
ಇದರೊಡನೆ ಸರಸಾಟ,
ಸಾವಿನೊಡನೆ ಸರಸಾಟ,
ಇದು ಮನುಕುಲದ ಅಳಿವು-
ಉಳಿವಿನ ಹೋರಾಟ.
ಈ ಕುಹಕಿಗಳು ಅಳಿದು, ಮನುಕುಲ
ಉಳಿಯುವಂತೆ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭

ಬೆಳಕಿನ ವೇಗ ಒಂದು ಲಕ್ಷ ಎಂಬತ್ತು ಸಹಸ್ರ ಮೈಲು
ಪ್ರತಿಸೆಕಂಡಿಗೆ.
ಇದನ್ನು ಮೀರುವ ವೇಗವೇ ಇಲ್ಲವಂತೆ,
ಆದರೆ ಮನಸ್ಸಿನ ವೇಗವನ್ನು ಅಳೆಯಬಲ್ಲವರಾರು?
ನಿಮಿಷಾಗಲೇ ಅದು ಅನಂತಗಾವುದಿರುವ
ಲೋಕದಲ್ಲಿ ವಿಹರಿಸಬಲ್ಲದು.
ಸ್ವೇಚ್ಛ ಮನಸ್ಸು ಮರ್ಕಟದಂತೆ,
ಇದಕ್ಕೆ ಕಡಿವಾಣಬೇಕು.
ಕಡಿವಾಣವಿಲ್ಲದ ಮನಸ್ಸು ದುಃಖಕ್ಕೆ ಮೂಲ.
ಇದಕ್ಕೆ ನಿನ್ನ ಧ್ಯಾನದ ಕಡಿವಾಣ ಹಾಕಿ;
ದಿವ್ಯಾನಂದದಲ್ಲಿರಿಸಯ್ಯ
ಇಷ್ಟಲಿಂಗ ರೂಪಿ ಹಂಪೆಯ ವಿರೂಪಾಕ್ಷೇಶ್ವರ.

೮

ಬಯಲು, ಬಟ್ಟ ಬರಿಯ ಬಯಲಲ್ಲ,
ಅದೊಂದು ಜೀವಂತ ಬಯಲು,
ಅದೊಂದು ತುಂಬಿದ ಬಯಲು,
ಅದು ಅನಂತ ಶಕ್ತಿಯ ಆಗರ,
ಅದು ಬಲಿತು ಸ್ಫೋಟಗೊಂಡಾಗ ಶಕ್ತಿಯ ಉದಯ.
ಶಕ್ತಿಗೆ ಅರಿವುಂಟೆಂದು ಹೇಳುತ್ತದೆ ಇಂದಿನ ವಿಜ್ಞಾನ.
ಬಯಲು ಸಚ್ಚಿದಾನಂದ ಸ್ವರೂಪವೆಂದು
ಹೇಳುತ್ತದೆ ಶರಣ ಸಿದ್ಧಾಂತ.
ಶಕ್ತಿಯಿಂದಾದವು ಎಲೆಕ್ಟ್ರಾನ್, ಪ್ರೋಟಾನ್,
ನ್ಯೂಟ್ರಾನ್ ಮೂಲಕಣಗಳು.
ಈ ಮೂಲ ಕಣಗಳಿಂದಾದವು ಪರಮಾಣುಗಳು.
ಪರಮಾಣುಗಳಿಂದಾದವು ಜ್ಯೋತಿರ್ಮೇಘಗಳು,
ಜ್ಯೋತಿರ್ಮೇಘಗಳಿಂದ ನಕ್ಷತ್ರಗಳ ಉದಯ,
ನಕ್ಷತ್ರಗಳ ಸಮೂಹಗಳೇ ನೀಹಾರಿಕೆಗಳು.
ಇಂಥ ಜ್ಯೋತಿರ್ಮೇಘಗಳು,
ಇಂಥ ನೀಹಾರಿಕೆಗಳು, ಶತಕೋಟಿ ಶತಕೋಟಿ
ನಕ್ಷತ್ರಗಳಿಂದುದಯ ಸೂರ್ಯಕುಟುಂಬಗಳು

ಅಗಾಧ ಸಂಖ್ಯೆಯಲ್ಲಿ,
ನಮ್ಮ ಭೂಗ್ರಹವೊಂದು ನಮ್ಮ ಸೂರ್ಯಕುಟುಂಬದ
ಕಿಂಚಿತ್ ಗ್ರಹ.
ನಮ್ಮ ಸೂರ್ಯ ಕುಟುಂಬವೊಂದು ಕಿಂಚಿತ್,
ಬಯಲಿನ ಈ ಅನಂತ ಸಾಗರದಲ್ಲಿ.
ಭೂಗ್ರಹದಲ್ಲಿ ಜೀವದ ಉದಯ
ಅದು ಹೇಗೆ?
ಇದಿನ್ನೂ ಒಡೆಯಲಾರದ ಒಗಟು,
ಬೋಧಿಸಲಾರದ ರಹಸ್ಯ.
ಜೀವದಿಂದುದಯ ಲಕ್ಷ ಲಕ್ಷ ಸಸ್ಯಗಳು, ಪ್ರಾಣಿಗಳು.
ಇವೆಲ್ಲವುಗಳಿಗೆ ಶಿಖರಪ್ರಾಯ ಮಾನವ,
ಇವನ ಉದಯ ಕೊನೆಯಲ್ಲಿ.
ಇವನ ಮಿದುಳೊಂದು ಅದ್ಭುತಯಂತ್ರ,
ಇದರಿಂದಲೇ ಇವನಿಗೆ ಸೃಷ್ಟಿಯಲ್ಲಿ ಅಗ್ರಪಟ್ಟ.
ಪ್ರಾಣಿಗಳ ಬಾಳು ಹತ್ತಾರುವರ್ಷ,
ಮಾನವ ಬಾಳು ನೂರಾರುವರ್ಷ,
ಗ್ರಹನಕ್ಷತ್ರಗಳ ಬಾಳು ಶತಕೋಟಿ ಶತಕೋಟಿ ವರ್ಷ!
ಕೊನೆಗೆಲ್ಲವೂ ಅನಂತಬಯಲಿನಲ್ಲಿ ಲೀನ,
ಬಯಲಿನಿಂದ ಬಂದುದು ಮರಳಿ ಬಯಲಿಗೆ,
ಇದು ಸೃಷ್ಟಿಯ ಲೀಲಾಚಕ್ರ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನೀ ರಚಿಸಿದ ಈ ಚಕ್ರದಲ್ಲಿ, ಚರಾಚರಕ್ಕೆಲ್ಲ
ಲೇಸನೆ ಬಯಸಿ, ಇದರ ಸುತ್ತಿನಲ್ಲಿ
ಸುತ್ತದಂತೆ ಮಾಡಯ್ಯ.

೯

ವಿಜ್ಞಾನ ಅಧ್ಯಾತ್ಮ ಒಂದೇ ನಾಣ್ಯದ
ಎರಡು ಮುಖಗಳಯ್ಯ,
ಇವೆರಡರಲ್ಲಿ ಬಿಡಿಸಲಾರದ ಸಂಬಂಧವಯ್ಯ.
ವಿಜ್ಞಾನ ಬಹಿರಂಗದ ಶೋಧನೆಯಾದರೆ
ಅಧ್ಯಾತ್ಮ ಅಂತರಂಗದ ಶೋಧನೆ.
ಇವೆರಡರ ಸಮನ್ವಯವೇ ಪರಿಪೂರ್ಣತೆಯಯ್ಯ,

ಇದೇ ಪೂರ್ಣಯೋಗವಯ್ಯ,
ಇದೇ ಶಿವಯೋಗವಯ್ಯ.
ಈ ಪಥದಲ್ಲಿ ನಡೆದು ನಿನ್ನ ಕಾಣಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೦

ಸಂಸಾರದ ಸಂಕಷ್ಟಗಳಿಗಂಜಿ
ಓಡಿಹೋಗುವದು ಹೇಡಿತನವಯ್ಯ.
'ಉರಿಬರಲಿ, ಸಿರಿಬರಲಿ' ಅವುಗಳನ್ನು
ಪ್ರಸಾದದಂತೆ ಸ್ವೀಕರಿಸಿ,
ಪುಟವಿಕ್ಕಿದ ಚಿನ್ನದಂತಾಗಬೇಕಯ್ಯ.
ಪ್ರಸಾದ ಜೀವಿಯಾಗಬೇಕಯ್ಯ.
ಸಂಸಾರವೇ ಒಂದು ಯೋಗವಯ್ಯ.
ಇದು ಎಲ್ಲ ಯೋಗಗಳಿಂದಧಿಕವಯ್ಯ.
ಇದು ಶರಣರು ತೋರಿದ ದಾರಿ ಕಾಣಯ್ಯ.
ಇದ ನಂಬಿ ಭವವ ಗೆಲ್ಲಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧

ಬಯಲು ಗೋಲಾಕಾರ,
ಇದೇ ಮಹಾಲಿಂಗ,
ಮಹಾಲಿಂಗ ಗೋಲಾಕಾರ.
ಇದರುಂದುದ್ಭವಿಸಿದ
ಗ್ರಹನಕ್ಷತ್ರಗಳು ಗೋಲಾಕಾರ.
ಭೂಮಿ ಗೋಲಾಕಾರ,
ಅನೇಕ ಹಣ್ಣು ಕಾಯಿಗಳು ಗೋಲಾಕಾರ,
ಚಿಣ್ಣರಾಡುವ ಗೋಲಿ ಗೋಲಾಕಾರ,
ಚಿಣ್ಣರು ನಿನ್ನ ಸಮಾನ!
ಗೋಲಾಕಾರ ಪರಿಪೂರ್ಣತೆಯ ಕುರುಹು,
ಇದು ನಿನ್ನ ಸೃಷ್ಟಿಯ ಮೂಲಕ
ನೀನು ಕಲಿಸುತ್ತಿರುವ ಪಾಠವಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨

ಪರಮಾಣುವೊಂದು ಸೂಕ್ಷ್ಮ ಬ್ರಹ್ಮಾಂಡವಯ್ಯ,
ಸೂಕ್ಷ್ಮದರ್ಶನ ಯಂತ್ರಕ್ಕೂ ಇದು ಅಗೋಚರವಯ್ಯ,
ಕೇಂದ್ರಬಿಂದುವಿನ ಪ್ರೋಟಾನ್ ನ್ಯೂಟ್ರಾನ್ ಕಣಗಳೇ
ಸೂರ್ಯನಯ್ಯ.
ಕಕ್ಷೆಯಲ್ಲಿ ಸುತ್ತುವ ಎಲೆಕ್ಟ್ರಾನುಗಳೇ ಗ್ರಹಗಳಯ್ಯ,
ಮಧ್ಯದಲ್ಲಿರುವದು ಅಂತರಾಕಾಶವಯ್ಯ.
‘ಎಥಾ ಬ್ರಹ್ಮಾಂಡ, ತಥಾ ಪಿಂಡಾಂಡ’ವೆಂಬುದು
ನಿನ ಸೃಷ್ಟಿಯ ರಹಸ್ಯ.
ಇಂಥ ರಹಸ್ಯಗಳಗಣಿತ ಈ ನಿನ್ನ ಸೃಷ್ಟಿಯಲ್ಲಿ.
ಮಾನವ ದೇಹ ನಿನ್ನ ಮನೆ, ಇದೊಂದು ಚಿದಂಬರ ರಹಸ್ಯ.
ನಿನ್ನನರಿಯಲೆಂದೇ ನಿನ್ನಿಂದಿರರಚನೆ.
ಇದರ ಅಂತರಂಗ ಬಹಿರಂಗವನ್ನು ಶುಚಿಗೊಳಿಸಿ
ನಿನ್ನರಿಯುವಂತೆ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೩

ತಮ್ಮ ಆಡಳಿತಕ್ಕೆ ಗುಮಾಸ್ತರು ಬೇಕೆಂದು
ರೂಪಿಸಿದನಯ್ಯ ಮೆಕಾಲೆ ತಕ್ಕ ಶಿಕ್ಷಣ ನೀತಿಯನ್ನು.
ದೇಶ ಸ್ವತಂತ್ರವಾದ ಮೇಲೆಯೂ ನಮ್ಮ ಶಿಕ್ಷಣ
ನೀತಿ ಜಾರಿಗೆ ಬರಲಿಲ್ಲವಯ್ಯ.
ಪರಿಸರಕ್ಕೆ ತಕ್ಕ ಶಿಕ್ಷಣ ನಿಜವಾದ ಶಿಕ್ಷಣವಯ್ಯ.
ನಮ್ಮ ಶಿಕ್ಷಣ ಇದರಿಂದ ಬಹುದೂರವಯ್ಯ.
ಕಲಿತದ್ದು ಜೀವನಕ್ಕೆ ಪ್ರಸ್ತುತವಿಲ್ಲಯ್ಯ.
ಓದುವದೊಂದನ್ನು, ಮಾಡಬೇಕಾದುದು ಬೇರೊಂದನ್ನು,
ಪರಿಪೂರ್ಣ ವ್ಯಕ್ತಿತ್ವ ರೂಪಿಸುವ ಶಿಕ್ಷಣ ಬೇಕಯ್ಯ.
ಇಂಥ ಶಿಕ್ಷಣ ಬೇಗನೇ ಜಾರಿಗೆ ಬರಲಯ್ಯ.
ಇದು ನಮ್ಮ ಸಂಸ್ಕೃತಿಯ ಅಳಿವು ಉಳಿವಿನ ಪ್ರಶ್ನೆಯಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೪

ಉಪದೇಶ ಕೊಡುವದು ಬಹಳ ಸುಲಭ,
ಆದರಂತೆ ನಡೆಯುವದು ಸುಲಭವೆ?

ಉಪದೇಶ ಮಾಡದೆ ತಾನೇ ನಡೆದು
ತೋರಿಸುವವ ಪರಜಂಗಮ.
ನುಡಿದಂತೆ ನಡೆಯುವ ಶರಣ.
ನುಡಿದಂತೆ ನಡೆಯದವ ಅಧಮ.
ಕೊನೆಯದನ್ನ ಬಿಡು,
ಮೊದಲೆರಡರಲ್ಲಿ ಒಂದನ್ನ ಹಿಡಿ.
ಇದೇ ಆತ್ಮೋದ್ಧಾರಕ ಸೂತ್ರ
ಇದೇ ಲೋಕೋದ್ಧಾರಕ ಸೂತ್ರ
ಇದೇ ನಮ್ಮ ಇಷ್ಟಲಿಂಗರೂಪಿ
ಹಂಪೆಯ ವಿರೂಪಾಕ್ಷೇಶ್ವರನಾಗುವ ಸೂತ್ರ.

೧೫

ಹಸಿವೆಂಬುದೊಂದು ಹೆಬ್ಬಾವು,
ಅದರ ವಿಷವನ್ನಿಳಿಸಲು ಅನ್ನವೇ ಬೇಕು.
ಹಸಿದವನಿಗೆ ಆಧ್ಯಾತ್ಮ ಹಿಡಿಸದು,
ಆಧ್ಯಾತ್ಮವಿಲ್ಲದ ಮಾನವ
ಆತ್ಮವಿಲ್ಲದ ದೇಹದಂತೆ.
ದುಡಿಮೆಯನ್ನು ದೈವೀಕರಣಮಾಡಿ,
ಕಾಯಕ ದಾಸೋಹ ಸೂತ್ರವ ಬೆಳಸಿ,
ಹಸಿವು ಆಧ್ಯಾತ್ಮವೆರಡನ್ನು ತಣಿಸಿದ
ವರಗುರು ಬಸವಣ್ಣ.
ಆಧ್ಯಾತ್ಮದ ನೆಲೆಯಲ್ಲಿದ ಸಾಮ್ಯವಾದ
ರಷ್ಯಾದಲ್ಲಿ ಮಣ್ಣು ಮುಕ್ಕಿತು,
ಕಾಯಕ ದಾಸೋಹ ಸೂತ್ರವಿಂದಿಗೂ ಜೀವಂತ.
ಈ ಮೂಲಕ ಲೌಕಿಕ ಪಾರಮಾರ್ಥವೆರಡನ್ನು
ಸಾಧಿಸಿದ ಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎನುತಿರ್ದೆನಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬

ನವಜಾತ ಕೂಸಿಗೆ ಜಾತಿಯಿಲ್ಲ, ಕುಲವಿಲ್ಲ,
ಅದು ವಿಶ್ವಚೇತನದ ನಿಷ್ಕಳಂಕಬಿಂದು.

ದೀಕ್ಷೆಯ ಮುದ್ರೆ ಬಿದ್ದಾಗ ಅದೊಂದು ಜಾತಿಯ ಕೂಸು,
ಜಾತಿಯ ಕೂಸಾಗದೆ ಧರ್ಮದ ಕೂಸಾಗಬೇಕಯ್ಯ,
ವಿಶ್ವಧರ್ಮದ ಕೂಸಾಗಬೇಕಯ್ಯ.
ಸಂಪ್ರದಾಯ ಸಾಂಕೇತಿಕವಯ್ಯ,
ಇದಮೀರಿ ಬೆಳೆಯಬೇಕು ಮಾನವ ಪೀಳಿಗೆಯಯ್ಯ,
ಎಲ್ಲ ಧರ್ಮಗಳು ಜಾತಿಗಳಾಗದೆ ಧರ್ಮಗಳಾದರೆ,
ಉಳಿದೀತು ಮಾನವ ಧರ್ಮ,
ಬೆಳೆದೀತು ಮಾನವ ಧರ್ಮ,
ಹೀಗಾಗುವಂತೆ ಕೃಪೆ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೭

ಕಷ್ಟಗಳು ಬಂದೇ ಬರುತ್ತವೆ,
ಬಂದರೆ ಸರಮಾಲೆಯಾಗಿಯೇ ಬರುತ್ತವೆ,
ಬಂದು ಬಂದು ಹಗುರಾಗಿ ಹೋಗುತ್ತವೆ.
ಕಷ್ಟವೇ ಬರಲಿ, ಸುಖವೇ ಬರಲಿ
ಬಂದ ಹಾಗೆಯೇ ಸ್ವೀಕರಿಸಿ,
ಚಿತ್ತಸ್ವಾಸ್ಥ್ಯವನ್ನು ಕಾಯ್ದುಕೊಳ್ಳುವದೇ ಯೋಗ.
ಇದಕ್ಕಿಂತಧಿಕ ಯೋಗವಿಲ್ಲ,
ಇದು ನೀಮಾಡಿದುಪದೇಶ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮

ಹುಟ್ಟಿದವರೊಂದು ದಿನ ಸಾಯಲೇಬೇಕು.
ಸಾವು ಹುಟ್ಟಿನ ಇನ್ನೊಂದು ಮುಖ.
ಹುಟ್ಟಿ ಸತ್ತಂತಿರಬಾರದು,
ಸತ್ತು ಹುಟ್ಟಿದಂತಿರಬೇಕು,
ಇದು ಶರಣರು ತೋರಿದ ದಾರಿ.
ಇದ ಪಾಲಿಸಿ ಸಾವನ್ನು ಗೆಲ್ಲಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯

ಹುಟ್ಟುತ್ತಲೇ ಪ್ರತಿಭಾಶಾಲಿಗಳಾಗಿ
ಹುಟ್ಟುವರು ಕೆಲವರು,
ಅಧ್ಯಯನ, ಚಿಂತನ, ಮನನದಿಂದ
ಪ್ರತಿಭಾಶಾಲಿಗಳಾಗುವರು ಕೆಲವರು.
ಮನಸ್ಸಿದ್ದಲ್ಲಿ ಮಾರ್ಗ,
ಸಂಕಲ್ಪ ಶಕ್ತಿಗಿಂತಧಿಕ ಶಕ್ತಿಯಿಲ್ಲ.
ಪರತತ್ವದ ಸಂಕಲ್ಪದಿಂದಲೇ
ಬ್ರಹ್ಮಾಂಡಗಳುದಯ.
ಮಾನವನೂ ಈ ಸಂಕಲ್ಪದ ಕೂಸು,
ಸಂಕಲ್ಪದಿಂದ ಮೂಕ ಮಾತನಾಡಬಹುದು,
ಸಂಕಲ್ಪದಿಂದ ಪಂಡಿತ ಪಾಮರನಾಗಬಹುದು;
ಸಂಕಲ್ಪದಿಂದ ಮಾನವ ದೇವನಾಗಬಹುದು.
ಇಂಥ ದೃಢಸಂಕಲ್ಪ ಎನ್ನಲ್ಲಿ ನೆಲಸುವಂತೆ
ಮಾಡಯ್ಯ, ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦

ಕರ್ತವ್ಯನಿಷ್ಠೆಯಿಂದ ಆತ್ಮೋದ್ಧಾರ,
ಕರ್ತವ್ಯನಿಷ್ಠೆಯಿಂದ ಕುಟುಂಬದುದ್ಧಾರ,
ಕರ್ತವ್ಯನಿಷ್ಠೆಯಿಂದ ಸಮಾಜೋದ್ಧಾರ,
ಕರ್ತವ್ಯನಿಷ್ಠೆಯಿಂದ ದೇಶೋದ್ಧಾರ,
ಕರ್ತವ್ಯನಿಷ್ಠೆಯಿಂದ ಮನುಕುಲದ ಉದ್ಧಾರ.
ಕರ್ತವ್ಯವೇ ದೇವರು.
ಕರ್ತವ್ಯನಿಷ್ಠೆಗಾಗಿ ಏಸು ಶಿಲುಬೆಯನೇರಿದ,
ಕರ್ತವ್ಯನಿಷ್ಠೆಗಾಗಿ ಬುದ್ಧ ರಾಜ್ಯ ತ್ಯಾಗ ಮಾಡಿದ,
ಕರ್ತವ್ಯನಿಷ್ಠೆಗಾಗಿ ಬಸವ ಮಂತ್ರಿ ಪದವಿಬಿಟ್ಟ,
ಇಂಥ ಕರ್ತವ್ಯನಿಷ್ಠೆ ಮನುಕುಲದಲ್ಲಿ
ನೆಲಸುವಂತಾಗಲಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧

ಅರಿವೇ ದೇವರು,
ಶಕ್ತಿಯೇ ದೇವರು,

ಆನಂದವೇ ದೇವರು,
ಇವುಗಳ ತ್ರಿವೇಣಿ ಸಂಗಮವೇ ಪರಿಪೂರ್ಣತೆ,
ಪರಿಪೂರ್ಣತೆಯೇ ನಿನ್ನಯ ಲಕ್ಷಣವಯ್ಯ.
ಅಣುವಿನಲ್ಲಿ ಪರಿಪೂರ್ಣತೆ,
ಬ್ರಹ್ಮಾಂಡದಲ್ಲಿ ಪರಿಪೂರ್ಣತೆ,
ಮಾನವನಲ್ಲಿ ಪರಿಪೂರ್ಣತೆ,
ಪರಿಶುದ್ಧ ಜೀವನದಿಂದ
ಅದು ಪ್ರಕಟವಯ್ಯ
ಇದೇ ಶಿವಜೀವ ರಹಸ್ಯವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨

ಪಾಪ ಪುಣ್ಯಗಳೆಂಬುವು ಸಾಪೇಕ್ಷ ಪದಗಳಯ್ಯ,
ಕಾಲ ಕಾಲಕ್ಕೆ ಅವುಗಳ ಸ್ವರೂಪ ಬದಲಾಗುವದಯ್ಯ.
ಯಾವ ಕಾಲದಲ್ಲಿಯೇ ಆಗಲಿ,
ಯಾವ ದೇಶದಲ್ಲಿಯೇ ಆಗಲಿ,
ಯಾವ ರೀತಿಯಲ್ಲಿಯೇ ಆಗಲಿ,
ಇತರರನು ನೋಯಿಸುವದೇ ಪಾಪವಯ್ಯ.
ಇತರರಿಗೆ ಹಿತಕಾರಿಯಾಗುವದೇ ಪುಣ್ಯವಯ್ಯ.
ಇದು ಪಾಪ ಪುಣ್ಯಗಳ ನಿರಂತರ ಸ್ವರೂಪವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೩

ಯಾವ ಡಿಗ್ರಿ ಪಡೆದರೇನು?
ಯಾವ ಶಾಸ್ತ್ರವನೋದಿದರೇನಯ್ಯ?
ಯಾವ ಪದವಿಗೇರಿದರೇನಯ್ಯ?
ಮನಸ್ಸು ಮಹದೇವನಾಗದನ್ನಕ್ಕರ.
ಸಜ್ಜನರ ಸಹವಾಸದಲ್ಲಿದ್ದು
ನನಗಿದು ಲಭ್ಯವಾಗುವಂತೆ ಮಾಡಯ್ಯ;
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪

ನಗು, ಅಳು, ಸುಖ, ದುಃಖ
ಇವು ಜೀವನದಲ್ಲಿ ಸಹಜವಯ್ಯ.
ಅತಿ ಸುಖವೇ ದುಃಖಕ್ಕೆ ನಾಂದಿ,
ಅತಿ ದುಃಖದ ಕೊನೆ ಸುಖದಲ್ಲಿಯಯ್ಯ
ಇದು ಜೀವನ ಲೀಲೆಯಯ್ಯ
ಇದುರ ಕರ್ತ ನಿನ್ನ ಲೀಲೆಯಯ್ಯ.
ಸುಖದುಃಖಗಳನ್ನು
ನಿನಗರ್ಪಿಸಿ ಭೋಗಿಸುವದೇ
ಜೀವನ ಸೂತ್ರವಾಗಬೇಕಯ್ಯ,
ಇದು ನೀನೊಲಿದ ಪಥವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫

ನಿನ್ನೊಲುಮೆಯ ಭಿಕ್ಷೆ ಕೂಡದಯ್ಯ,
ನೀನೊಲಿಯುವಂತೆ ದೇಹ ಮನಗಳನು
ಸಂಸ್ಕರಿಸಕೊಳ್ಳಬೇಕಯ್ಯ.
ಮನದಲಿ ವಿಷಯ ತುಂಬಿ,
ತನುವಿನಲಿ ಹುಸಿತುಂಬಿ,
'ನೀನೊಲಿ' 'ನೀನೊಲಿ' ಎಂದರೆ;
ಎಂತೊಲಿವೆಯಯ್ಯ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬

ಆಗ ನಾನಿರಲಿಲ್ಲ,
ನಾನಿಲ್ಲದ ಕಾರಣ ನೀನೂ ಇರಲಿಲ್ಲ,
ಇದ್ದರೂ ಇಲ್ಲದಂತೆ ಇದ್ದೆ ನೀನು.
ಆಗ ನಿನ್ನ ಕೇಳುವರಾದರೂ ಯಾರು?
ನನ್ನ ಉದಯವಾದ ಮೇಲೆ
ನಿನ್ನ ಅಸ್ತಿತ್ವ ರಂಗೇರಿತು
ನಿನ್ನ ಪೂಜಿಸಲು ಹುಟ್ಟಿದವು
ದೇವಾಲಯ, ಚರ್ಚು, ಮಸೀದಿಗಳು.

ನಿನ್ನನರಿಯಲು, ನಿನ್ನ ಹೊಗಳಲು
ಕಾಣಿಸಿಕೊಂಡವು ಶಾಸ್ತ್ರ, ಪುರಾಣ, ಕಾವ್ಯ,
ವಚನ, ಬೈಬಲ್ಲುಗಳು ಕಾಣಯ್ಯ.
ಅದು ಕಾರಣ ನೀನೆನ್ನಹಂಗಿಗ.
ನಾನೀನೆಂಬುಭಯಭೇದವೇ ಈ ಸೃಷ್ಟಿ.
ರಾಗ, ದ್ವೇಷ ಅಹಂಕಾರ ಮಮಕಾರಗಳೇ
ಇದರ ಲೀಲೆಗಳು,
ನಿನ್ನ ಈ ಲೀಲೆ ಮುಗಿದಾಗ
ನಾನೂ ಇಲ್ಲ, ನೀನೂ ಇಲ್ಲ.
ಎಲ್ಲಿಂದ ಪ್ರಾರಂಭವೋ ಅಲ್ಲಿಯೇ ಮುಕ್ತಾಯ
ಈ ಭೇದವ ತಿಳಿದರೆಷ್ಟು ಜನ
ತಿಳಿದೂ ತಿಳಿಯದಂತಿರಬೇಕೆಂಬುದು
ನಿನ್ನ ಆಣತಿ, ಈ ಆಣತಿಯ ಮೀರಿದರು
ನಿನ್ನ ಶರಣರು,
ನಿನ್ನ ಇರವಿನ ಮರ್ಮವನು
ಎಲ್ಲರಿಗೂ ಸಾರಿದರು, ನಿನ್ನ ತೋರಿದರು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೭

ಗೃಹಸ್ಥನಾಗಲಿ, ಸನ್ಯಾಸಿಯಾಗಲಿ,
ಭಕ್ತನಾಗಲಿ, ಜಂಗಮನಾಗಲಿ,
ರಾಜನಾಗಲಿ, ಪ್ರಜೆಯಾಗಲಿ,
ಮೂರ್ಖನಾಗಲಿ, ಪಂಡಿತನಾಗಲಿ
ಹಸಿವು ತೃಷೆ ಮೈಥುನಗಳೆಲ್ಲ ಒಂದೇ.
ಇವೆಲ್ಲ ಪ್ರಾಣಿ ಗುಣ, ನರಗುಣ,
ಪರರ ಸುಖದುಃಖಕ್ಕೆ ಸ್ಪಂದಿಸಿ
ಅವರಿಗೆ ನೆರವಾಗುವದೇ ಹರಗುಣ.
ಇವನಳವಡಿಸಿಕೊಂಡವನೇ ದಿವ್ಯಮಾನವ.
ಇಂಥ ದಿವ್ಯತೆಯ ಪಡೆಯಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೮

ಸೃಷ್ಟಿ ಚಕ್ರ ತಿರುಗುತಲೇ ಇದೆ.
ಶಿವನ ಹಗಲೇ ಸೃಷ್ಟಿ
ಶಿವನ ರಾತ್ರಿಯೇ ಪ್ರಳಯ,
ಸೃಷ್ಟಿ ಪ್ರಳಯಗಳು ಅವನ
ಹಗಲು ರಾತ್ರಿಗಳು.
ಇದಕಾದಿ ಅಂತ್ಯಗಳಿಲ್ಲ,
ಇದು ನಿರಂತರ ಪ್ರಕ್ರಿಯೆ,
ಶಿವ ಕಾಲಾತೀತ ಅವಲಿನಂತ
ಅವನ ಈ ಲೀಲೆಯೂ ಅನಂತ
ಅನಂತತೆಯೇ ಅವನ ಇನ್ನೊಂದು ಹೆಸರಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೯

ಬ್ರಹ್ಮಾಂಡವೊಂದು ಬೃಹತ್‌ಸೌಧ
ಗ್ರಹನಕ್ಷತ್ರಗಳೇ ಇದರ ಇಟ್ಟಿಗೆಗಳು.
ಅಣು ಪರಮಾಣುಗಳೇ ಇದರ ಘಟಕಗಳು,
ಎಲೆಕ್ಟ್ರಾನ್, ಪ್ರೋಟಾನ್, ನ್ಯೂಟ್ರಾನ್ ಕಣಗಳಿಂದ
ಇವುಗಳ ರಚನೆ, ನೀನೇ ಇದರ ಯಂತ್ರವಾಹಕ.
ವಿಶ್ವದ ಸ್ಥಿತಿಗತಿಗಳೇ ನಿನ್ನ ನಾಟ್ಯಲೀಲೆ
ವಿಶ್ವದ ಕಣಕಣಗಳಲ್ಲಿಯೂ ನಿನ್ನ ತಾಂಡವ ಲೀಲೆ.
ನೀನು ತತ್ವಜ್ಞಾನಿಗಳಿಗಭೇದ್ಯ,
ವಿಜ್ಞಾನಿಗಳಿಗಸಾಧ್ಯ.
ತಿಳಿದಂತೆ ತೋರಿ ತಿಳಿಯದಿರುವ
ಎಂದೆಂದು ತಿಳಿಯಲಾಗದ ಈ ಒಗಟು ಒಡೆಯಲಾಗದು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೦

ಮಾನವ ದೇಹವೊಂದು ಅಗಾಧಯಂತ್ರ,
ಜಟಿಲತೆಯಲ್ಲಿ ಇದು ಅಭೇದ್ಯ,
ಇದೊಂದು ಜೀವಾಣುಗಳ ಸಂಸ್ಥೆ,
ಒಂದೊಂದು ಜೀವಾಣುವು ಘಟ್ಟ ವಿಶ್ವ, ಸೂಕ್ಷ್ಮ ವಿಶ್ವ,

ಮಿದುಳಿನಲಿ ಇವುಗಳ ಸಂಖ್ಯೆ ಸಾವಿರಕೋಟಿ.
ಇಡೀ ದೇಹದಲ್ಲಿ ಇವುಗಳ ಸಂಖ್ಯೆ ಅಗಣಿತ.
ಇವುಗಳಿಂದಲೇ ನಡೆಯುವದು ದೇಹಯಂತ್ರ.
ಮಿದುಳಿನ ಮೂಲಕ ಕಾರ್ಯನಿರ್ದೇಶನ,
ಮಿದುಳಿನ ಸಾರಸರ್ವಸ್ವವೇ ಮನಸ್ಸು
ಜೀವಾಣುಗಳನ್ನು ದೈವೀಕರಿಸಿ, ಮನವನು ದೈವೀಕರಿಸಿ
ದೇಹವನ್ನೇ ದೇವಾಲಯವನ್ನಾಗಿ ಮಾಡಿದರು ನಮ್ಮ ಶರಣರು.
ಜೀವಾಣುವೊಂದೊಂದೂ ಲಿಂಗಮಯ
ಆಗಲೇ ಆಯಿತು ಸರ್ವಾಂಗ ಲಿಂಗಸ್ಥಲಸಿದ್ಧಿ.
ಆಧ್ಯಾತ್ಮವೇ ಆಯಿತು ಜೀವನುಸಿರು.
ಈ ಅಘಟಿತ ಘಟಿತವ ಮಾಡಿದ
ಶರಣರ ಶ್ರೀಪಾದಕ್ಕೆ ನಮೋನಮೋ ಎನುತಿರ್ದೆನಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೧

ಮನಸ್ಸಿಗೆ ಮುಖವೇ ಕನ್ನಡಿ,
ಮುಖಕ್ಕೆ ನೇತ್ರಗಳೇ ಕನ್ನಡಿ,
ನೇತ್ರಗಳಿಗೆ ಜ್ಞಾನನೇತ್ರವೇ ಕನ್ನಡಿ,
ಇದೇ ಶಿವನ ಹಣೆಗಣ್ಣು, ಅವನ ಮೂರನೆಯ ಕಣ್ಣು.
ಇದು ಜಾಗೃತವಾದರೆ ಸೃಷ್ಟಿರಹಸ್ಯ ಕಣ್ಣೆದುರು.
ಇಷ್ಟಲಿಂಗದ ದೃಷ್ಟಿಯೋಗದಿಂದ
ಇದು ಸುಲಭ ಸಾಧ್ಯವಯ್ಯ
ಈ ಮಾರ್ಗದಿಂದ ವಿಮುಖರಾಗುವದು ಸಲ್ಲದಯ್ಯ.
ಹಲವಾರು ಯೋಗಗಳ ಬೆನ್ನು ಬೀಳುವದು ಗಾಂಪತನವಯ್ಯ.
ಅಂಗೈಯಲ್ಲಿ ಬೆಣ್ಣೆ ಇರಲು
ಊರ ತಿರುಗಾಡಿ ತುಪ್ಪವನರಸಲೇಕಯ್ಯ.
ನೆರೆನಂಬು ಇಷ್ಟಲಿಂಗವ, ಸಾಧಿಸು ಶಿವಯೋಗವ,
ಮಾಡು ಇದೆ ಜನ್ಮ ಕಡೆ ಎಂದಾತ
ನಮ್ಮ ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೨

ಮಂತ್ರಕ್ಕೆ ಮಾವಿನಕಾಯಿ ಉದುರುವುದಿಲ್ಲ,
ದೈವವನ್ನು ನಂಬಿ ಪ್ರಯತ್ನ ಬಿಟ್ಟರೆ ಕಾರ್ಯಸಿದ್ಧಿ ಇಲ್ಲ.

ದೈವವೇ ಪ್ರಯತ್ನ, ಪ್ರಯತ್ನವೇ ದೈವ.
ದೈವ ಪ್ರಯತ್ನಗಳ ಸಂಬಂಧ
ದೀಪ ದೀಪ್ತಿಗಳ ಸಂಬಂಧ.
ಸಾಧಿಸಬೇಕು ಇವೆರಡರಿಂದ ಜೀವನ ಸಿದ್ಧಿ.
ಇದು ಮನುಕುಲದ ಅನುಭಾವದ ಸಾರಸರ್ವಸ್ವವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೩

ದೇಹವೊಂದು ರಾಸಾಯನಿಕ ಕ್ರಿಯೆಗಳ ಕಾರಖಾನೆ.
ಈ ಕ್ರಿಯೆಗಳೇ ಜೀವಕ್ಕಾಧಾರ,
ಹೃದಯ ಮಿದುಳುಗಳೇ ಇವಕ್ಕಾಧಾರ,
ಇದು ವಿಜ್ಞಾನದ ಸಾರಾಸಾರ.
ಆತ್ಮವೇ ಎಲ್ಲಕ್ಕೂ ಮೂಲಾಧಾರ
ಆತ್ಮವೇ ದೇಹಯಂತ್ರವಾಹಕ
ಇದು ತತ್ವಜ್ಞಾನದ ಸಾರ.
ಆತ್ಮದಿಂದ ಜೀವ ಸೃಷ್ಟಿ
ಜೀವವೇ ಪ್ರಾಣಲಿಂಗ.
ಹೃದಯವೇ ಇದರ ಸ್ಥಾನ.
ಬ್ರಹ್ಮರಂಧ್ರವೇ ಭಾವಲಿಂಗ.
ಪ್ರಾಣಲಿಂಗದ ಕರವಿಷ್ಟಲಿಂಗ ಸಂಕೇತ
ತ್ರಿಲಿಂಗಗಳಿಗೆ ದೇಹವೇ ಆಶ್ರಯ
ಇದು ಕಾರಣ ದೇಹವೇ ದೇವಾಲಯ.
ಇದು ವಿಜ್ಞಾನ ಆಧ್ಯಾತ್ಮಗಳ ಸಮನ್ವಯ
ಇದನರಿತು ಶರಣಪಥದಲ್ಲಿ ಸಾಗಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೪

ಶಿವಶಕ್ತಿಯೆಂಬುದೊಂದು ಸಂಪುಟ.
ಶಿವನ ಬಿಟ್ಟು ಶಕ್ತಿಯಿಲ್ಲ,
ಶಕ್ತಿಯ ಬಿಟ್ಟು ಶಿವನಿಲ್ಲ,
ಇವು ಒಂದಕ್ಕೊಂದು ಪೂರಕ.
ಇದು ಶಕ್ತಿ ವಿಶಿಷ್ಟಾದ್ವೈತ.

ವಸ್ತುವಿನ ವಿಘಟನೆಯಿಂದ,
ಶಕ್ತಿಯ ಉದಯ.
ಶಕ್ತಿಯ ಸಾಂದ್ರೀಕರಣದಿಂದ
ವಸ್ತುವಿನ ಸೃಷ್ಟಿ,
ವಸ್ತುವಿನ ಸೂಕ್ಷ್ಮರೂಪವೇ ಶಕ್ತಿ.
ಶಕ್ತಿಯ ಸ್ಥೂಲ ರೂಪವೇ ವಸ್ತು.
ಇವುಗಳಲ್ಲಿ ಅವಿನಾಭಾವ ಸಂಬಂಧ.
ಇದು ಋಷಿವಿಜ್ಞಾನಿ ಐನ್‌ಸ್ಟೀನ್ ಸಿದ್ಧಾಂತ
ಇದು ವ್ಯಾವಹಾರಿಕ ಸತ್ಯ.
ಇದರ ಮೂಲದಲ್ಲಿಯೇ ಪರಾತ್ಪರ ಸತ್ಯ,
ಇದು ನಿನ್ನ ಒಡೆಯಲಾರದಾ ಒಗಟು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೫

ಮಾನವನ ಶೈಶವಾವಸ್ಥೆಯಲ್ಲಿ
ಯಾವ ನಿಯಮಗಳೂ ಇರಲಿಲ್ಲವಯ್ಯ,
ಸೃಷ್ಟಿನಿಯಮಗಳು ಮಾತ್ರ ಇದ್ದವಯ್ಯ,
ಮಾನವ ಸಮಾಜ ಜೀವಿಯಾಗಿ
ಸೃಷ್ಟಿಸಿಕೊಂಡನಯ್ಯ ನಿಯಮಗಳನ್ನು,
ಸಾಮೂಹಿಕ ಜೀವನಕೆ ಬೇಕಯ್ಯ ನಿಯಮಗಳು.
ವ್ಯಷ್ಟಿಸಮಷ್ಟಿನಿಯಮ ಬದ್ಧವಾದರೆ
ದೇಶೋದ್ಧಾರವಯ್ಯ.
ನಿಯಮಬದ್ಧ ಜೀವನವೇ
ಇಹಪರಗಳ ಸಾಧನೆಗೆ ಮೂಲವಯ್ಯ.
ಕೆಡೆನುಡಿಯದೆ, ಕೆಡನಡೆಯದೆ,
ಮುನ್ನಡೆಯುವುದು ಇಂದು ಬೇಕಾಗಿರುವ ನಿಯಮವಯ್ಯ.
ಈ ಪಥದಲ್ಲಿ ನಡೆದು ಮಾನವಕುಲ
ಬದುಕುವಂತೆ ಮಾಡಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೬

ನಮ್ಮ ದೇಶದಲ್ಲಿ ಮಾತೆತ್ತಿದರೆ ಮುಷ್ಕರ.
ಸಂಬಳ ಹೆಚ್ಚಿಸುವುದಕ್ಕಾಗಿ ಸರಕಾರಿ ನೌಕರರ ಮುಷ್ಕರ,

ಬ್ಯಾಂಕ್ ನೌಕರರ ಮುಷ್ಕರ,
ಅಂಚೆ ನೌಕರರ ಮುಷ್ಕರ,
ಉತ್ತರ ಪತ್ರಿಕೆ ಮೌಲ್ಯಮಾಪನ ಬಹಿಷ್ಕರಿಸಿ ಶಿಕ್ಷಕರ ಮುಷ್ಕರ,
ಬೇಡಿಸಿಕೊಳ್ಳುವದು ಸರಕಾರವಲ್ಲ.
ಬೇಡುವಾತ ನೌಕರನಲ್ಲ.
ಬೇಡಿಸಿಕೊಳ್ಳಬಾರದು ಸರಕಾರ.
ನೀಡುವ ಕೂಲಿ ಸರಕಾರದಿಂದ ಬರಲಿ.
ಹೇಮುದಾಸಗೆ ಇದಮಿಂದ ನೌಕರರು ಕೇಳದಿರಲಿ
ಇದು ಶರಣರು ತೋರಿದ ದಾರಿ.
ಈ ದಾರಿಯಲ್ಲಿ ನಮ್ಮ ದೇಶ ನಡೆಯುವಂತೆ ಮಾಡಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬.೭

ಅಂತರಂಗ ಬಹಿರಂಗವ
ಹದಗೊಳಿಸುವ ಶಿಕ್ಷಣವೇ
ಪರಿಪೂರ್ಣ ಶಿಕ್ಷಣವಯ್ಯ,
ಅನುಭವ ಮಂಟಪ ನೀಡಿತಯ್ಯ
ಇಂಥ ಶಿಕ್ಷಣವನು ಜನತೆಗೆ.
ಇಂದು ನಮಗೆ ಬೇಕಾಗಿರುವುದು
ಇಂಥ ಶಿಕ್ಷಣವಯ್ಯ.
ಪರಕೀಯ ಶಿಕ್ಷಣ ರೀತಿ ತೊಲಗಿ
ಬರಲಯ್ಯ ನಮ್ಮ ಶಿಕ್ಷಣ ಜಾರಿಗೆ.
ರಾಷ್ಟ್ರ ಸರಕಾರ ರೂಪಿಸಲಯ್ಯ
ನಮ್ಮ ಮೌಲ್ಯಾಧಾರಿತ ಶಿಕ್ಷಣ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬.೮

ಮನುಕುಲವೊಂದೇ,
ಮಾನವ ದೇಹದ ರಾಸಾಯನಿಕ
ಸಂಯೋಜನೆ ಒಂದೇ.
ಇಂಗಾಲ, ಜಲಜನಕ, ಆಮ್ಲಜನಕ
ಸಾರಜನಕ, ರಂಜಕ, ಕಬ್ಬಿಣ, ಸುಣ್ಣ
ಈ ಕೆಲವು ಮೂಲಾಂಶಗಳಿಂದ ದೇಹ ರಚನೆ.

ಇವುಗಳ ಮೂಲದಲ್ಲಿರುವವು ಎಲೆಕ್ಟ್ರಾನ್,
ಪ್ರೋಟಾನ್, ನ್ಯೂಟ್ರಾನ್ ಕಣಗಳು,
ಇವುಗಳಿಗೆ ಮೂಲ, ಶಕ್ತಿ,
ಶಕ್ತಿಗೆ ಮೂಲ ಶೂನ್ಯ, ಬಯಲು.
ನಾವೆಲ್ಲ ಬಯಲಿನ ಮಕ್ಕಳು
ಮತ್ತೆ ಬಯಲಿಗೆ ಹೋಗಬೇಕು.
ಈ ಮಧ್ಯೆ ಕುಲಜಾತಿಗಳ ಗೋಜೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೯

ಸರ್ವಶೂನ್ಯ ನಿರಾಲಂಬ ಸ್ಥಲವೇ
ಅಂತಿಮ ಸತ್ಯವಯ್ಯ.
ಇದು ಕಾಲಾತೀತ ಸತ್ಯವಯ್ಯ.
ಅಲ್ಲಿಂದ ಮುಂದೆ ಶಬ್ದವಿಲ್ಲ ಶಬ್ದವಿಲ್ಲ!
ಸರ್ವಶೂನ್ಯ ಹಡೆಯಿತು ಶೂನ್ಯಲಿಂಗವ,
ಇಲ್ಲಿಂದ ಕಾಲ ಪ್ರಾರಂಭವಯ್ಯ.
ಇದರಿಂದುದಯ ನಿಃಕಲಲಿಂಗಸ್ಥಲವಯ್ಯ,
ಮೂಡಿಬಂದವು ಇದರಿಂದ ಸತ್‌ಚಿತ್ ಆನಂದಗಳು,
ನಿಃಕಲ ಲಿಂಗದಿಂದುದಯ ಮಹಾಲಿಂಗಸ್ಥಲ.
ಇದು ಗೋಲಾಕಾರ ತೇಜೋಮಯ ಲಿಂಗವಯ್ಯ,
ಇದು ಅನಂತಶಕ್ತಿಯ ಆಗರವಯ್ಯ,
ಇದೇ ಪ್ರಣವ, ಇದೇ ಓಂಕಾರವಯ್ಯ,
ಇದರಿಂದ ಹೊರಹೊಮ್ಮುವವು
ನಾದ ಬಿಂದು ಕಲೆಗಳು,
ಇಲ್ಲಿಂದಲೇ ಪ್ರಾರಂಭ ವಿಶ್ವಸೃಷ್ಟಿ.
ಇದೇ ಐನ್‌ಸ್ಟೀನ್ ಪರಿಕಲ್ಪನೆಯ ಸ್ಥಲ (Space) ವಯ್ಯ,
ಇದೂ ಗೋಲಾಕಾರವಯ್ಯ,
ಶಕ್ತಿಯ ಉದಯ ಗೋಲಾಕಾರಕೆ ಕಾರಣವಯ್ಯ.
ಇದರಿಂದ ಗುರುತ್ವಾಕರ್ಷಣ ಸೃಷ್ಟಿ.
ಇಲ್ಲಿಂದ ಸೃಷ್ಟಿ ಪ್ರಾರಂಭವಯ್ಯ,
ಕಾಲ ಪ್ರಾರಂಭವಯ್ಯ.

ಈ ಸೃಷ್ಟಿ, ಸ್ಥಲ ಕಾಲಗಳ
ನಿರಂತರ ಮುಂದುವರಿಕೆಯಯ್ಯ.
ಇದು ಶರಣರ ವಿಚಾರಧಾರೆಯ
ಇನ್ನೊಂದು ರೂಪವಯ್ಯ.
ಆಧ್ಯಾತ್ಮ ವಿಜ್ಞಾನ ಇವುಗಳ ದಾರಿ ಬೇರೆ.
ಗುರಿ ಒಂದೇ, ಸೇರುವ ತಾಣ ಒಂದೇ.
ಇದು ನೀನು ಮನಕುಲಕೆ ನೀಡಿದ ರಹಸ್ಯಜ್ಞಾನವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೦

ಲಂಚ, ಲಂಚ, ಲಂಚ ಎಲ್ಲಿ ನೋಡಿದರೂ ಲಂಚ
ಇದು ಲಂಚಾವತಾರ ಯುಗ!
ಪರಮಾತ್ಮ ಎಲ್ಲೆಡೆಯಿದ್ದಾನೆಯೊ? ಗೊತ್ತಿಲ್ಲ.
ಲಂಚ ಮಾತ್ರ ಇಲ್ಲದ ಜಾಗವಿಲ್ಲ.
ಮಂತ್ರಿಗಳಿಂದ ಜವಾನರವರೆಗೆ
ಎಲ್ಲರಿಗೂ ಬೇಕು ಲಂಚ.
ದೇವರಪ್ಪಣೆಯಿಲ್ಲದೆ ಹುಲ್ಲಕಡ್ಡಿಯೂ
ಚಲಿಸದೆಂಬುದು ಹಳೆಯ ಮಾತು.
ಲಂಚವಿಲ್ಲದೆ ಒಂದು ಗರಿಕೆಯೂ
ಚಲಿಸದೆಂಬುದು ಈ ಯುಗದ ಮಾತು.
ಲಂಚ ಭ್ರಷ್ಟಾಚಾರವೇ ಇಂದು ಜೀವನ ರೀತಿ.
ನಮ್ಮ ದೇಶಕ್ಕೆ ಇದರಲ್ಲಿ ಅಗ್ರಪಟ್ಟ.
ಹೀಗಿದ್ದರೂ ಬದುಕಿದೆ ಈ ದೇಶ
ಇದು ರಷ್ಯಾದ ಹಿಂದಿನ ಧುರೀಣ
ಕ್ರುಶ್ಚೇವ ಹೇಳಿದ ಮಾತು.
ಆತನಿಗೆ ದೇವರಲ್ಲಿ ನಂಬಿಕೆ ಹುಟ್ಟಲು
ಇದೇ ಆಧಾರ, ಯಾಕೆಂದರೆ ಈ ದೇಶ
ದೇವರಿಂದಲೇ ನಡೆದಿದೆಯೆಂಬುದು ಆತನ ವಿಶ್ವಾಸ.
ಪ್ರಳಯ ಜರುಗಿಸಿ ಪುನಃಸೃಷ್ಟಿ ಪ್ರಾರಂಭಿಸಿ,
ಭ್ರಷ್ಟಾಚಾರವ ಅಡಗಿಸಿ
ಸದಾಚಾರ ನೆಲೆಸುವಂತೆ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೧

ಈ ವಿಶ್ವವೊಂದು ವಸ್ತುಗಳ ಅದ್ಭುತ ಸಾಗರ!
ಇವುಗಳ ಆಂತರಿಕ ಸಂಯೋಜನೆ ಅತಿ ವಿಚಿತ್ರ!
ಅಣು ಪರಮಾಣುಗಳ ಪರಸ್ಪರ ವಿದ್ಯುತ್
ಬಂಧಗಳಿಂದ ಇವುಗಳ ರಚನೆ.
ಈ ಬಂಧಗಳ ಸ್ವರೂಪ ಬದಲಾದರೆ
ವಸ್ತುಗಳ ಸ್ವರೂಪವೆ ಬೇರೆ, ಹೊಸ ವಸ್ತುಗಳ ಸೃಷ್ಟಿ!
ಜಲಜನಕ, ಆಮ್ಲಜನಕ, ಸಾರಜನಕ
ಹೀಗೆ ಕೆಲವೇ ಮೂಲಾಂಶಗಳು
ಒಂದು ರೀತಿಯಲ್ಲಿ ಸಂಯೋಜಿಸಿ
ವಿಷವನ್ನು ಸೃಷ್ಟಿಸಿದರೆ
ಅವೇ ಬೇರೊಂದು ರೀತಿಯಲ್ಲಿ ಸಂಯೋಜಿಸಿ ಮಾಡುವವು
ಅಮೃತಸೃಷ್ಟಿ, ಆಹಾರಸೃಷ್ಟಿ, ಔಷಧ ಸೃಷ್ಟಿ.
ಸೃಷ್ಟಿಯ ಎಲ್ಲ ಹಂತಗಳಲ್ಲಿ
ಇದು ನಿನ್ನ ಲೀಲಾವಿಲಾಸವಯ್ಯ.
ನೀನು ಏನಾದರೂ ಆಗಿ ತೋರಬಹುದೆಂಬುದಕೆ
ಇದು ನಿದರ್ಶನವಯ್ಯ.
ಇದನರಿತ ವಿಜ್ಞಾನಿ ತತ್ವಜ್ಞಾನಿಯಾಗುವನಯ್ಯ
ತತ್ವಜ್ಞಾನಿ ವಿಜ್ಞಾನಿಯಾಗುವನಯ್ಯ!
ಹೇಳುವದು ಈ ನಿನ್ನ ಸೃಷ್ಟಿ
'ವಿಜ್ಞಾನಿಯಾಗೆಂದು ತತ್ವಜ್ಞಾನಿಯಾಗೆಂದು ಕವಿಯಾಗೆಂದು'
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೨

ಊಟ ಬಲ್ಲವನಿಗೆ ರೋಗವಿಲ್ಲ
ಮಾತು ಬಲ್ಲವನಿಗೆ ಜಗಳವಿಲ್ಲ,
ಇದೊಂದು ಹಳೆಯ ಗಾದೆ.
ವೇದಕ್ಕಿಂತ ಗಾದೆ ಮೊದಲು
ಈ ಸತ್ಯವನು ಸಾರುತಿದೆ ಈ ಮಾತು.
ಸಮತೂಕ ಆಹಾರ ಆರೋಗ್ಯ ರಕ್ಷಣೆಯ ತಾರಕ ಸೂತ್ರ.
ಪ್ರೋಟೀನುಗಳು, ಪಿಷ್ಟಗಳು, ಕೊಬ್ಬುಗಳು,
ಜೀವಸತ್ವಗಳು, ಖನಿಜಗಳು, ಪರಿಶುದ್ಧ ನೀರು

ಇವುಗಳ ಹದವುಳ್ಳ ಪ್ರಮಾಣಬದ್ಧ ಆಹಾರ ಸಮತೂಕ ಆಹಾರ.
ಇದರ ಸೇವನೆ ಆರೋಗ್ಯ ಕಾಪಾಡಲಾಧಾರ.
ಇದು ಆರೋಗ್ಯ ಜೀವನದ ಮೂಲಸೂತ್ರ
ದೀರ್ಘಾಯುಷ್ಯದ ತಾರಕಮಂತ್ರ.
ಹಿತಮಿತ ಆಹಾರ, ಕ್ರಮಬದ್ಧ ಜೀವನ,
ನೀತಿಯ ಬಾಳು, ಸಜ್ಜನರ ಸಹವಾಸ
ಸತತ ನಿನ್ನ ಧ್ಯಾನ ಇವು ಬಾಳ ಸಾಗರವ
ದಾಟಿಸುವ ಹರಿಗೋಲಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೩

ನಿನ್ನ ನೆನೆದರೆ ಪಾಪ ನಾಶವಾಗಿ
ಪುಣ್ಯ ಲಭಿಸುವದೆಂದು ಹೇಳುವರಯ್ಯ.
ಪಾಪ ಪುಣ್ಯಗಳೆಂಬುವು ತಮ್ಮಿಷ್ಟ ಕಂಡಿರಯ್ಯ.
ಪರಪೀಡನೆಯೆ ಪಾಪ ಪರಹಿತವೇ ಪುಣ್ಯ.
ಇದರಾಚರಣೆ ನಿನ್ನ ನಿಜವಾದ ಧ್ಯಾನವಯ್ಯ
ಇದೇ ಸಕಲ ಜಪತಪವಯ್ಯ.
ಇದೇ ನಿನ್ನೊಲುಮೆಯ ಮಂತ್ರವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೪

ಮಾನವ ದೇಹವೊಂದು
ನುಡಿಯುವ ಯಂತ್ರ.
ನಡೆಯುವ ಯಂತ್ರ.
ಯೋಚಿಸುವ ಯಂತ್ರ.
ಬರೆಯುವ ಯಂತ್ರ
ಓದುವ ಯಂತ್ರ
ರೋಬೋಟುಗಳೂ ಈ ಕೆಲಸ ಮಾಡಬಲ್ಲವು.
ರೋಬೋಟು ಒಂದು ಯಾಂತ್ರಿಕ ಮಾನವ.
ಇದಕೆ ಅರಿವಿಲ್ಲ, ಆತ್ಮವಿಲ್ಲ, ಭಾವನೆಗಳಿಲ್ಲ,
ಅರಿವು ಆತ್ಮಗಳ ಮಾನವ
ಭೌತಿಕ ಯಂತ್ರವಾಗದೆ
ನಿನ್ನನರಿಯುವ ಆಧ್ಯಾತ್ಮಿಕ

ಯಂತ್ರವಾಗುವಂತೆ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೫

ನಿಸರ್ಗವೇ ಗುರು
ಆಕಾಶವೇ ಲಿಂಗ
ಸಕಲ ಚೇತನವೇ ಜಂಗಮ
ಕರ್ತವ್ಯವೇ ಕಾಯಕ
ಇವುಗಳನಾರಾಧಿಸಿ
ನಡೆ ಮುಕ್ತಿಧಾಮಕೆ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೬

ಸರಕಾರಿ ಕಛೇರಿಗಳು ತೆಗೆಯುವದು
ಮುಂಜಾನೆ ಹತ್ತು ಗಂಟೆಗೆ.
ಅವು ಬಣ ಬಣ, ಹನ್ನೊಂದು ಗಂಟೆಯವರೆಗೆ.
ಹನ್ನೊಂದು ಗಂಟೆಗೆ ಹೋದರೆ ಕಾಫಿಗೆ ಹೋಗಿರುವರೆಂದು ಉತ್ತರ.
ಹನ್ನೆರಡು ಗಂಟೆಗೆ ಹೋದರೆ ಅವರು ಸೀಟಿನಲ್ಲಿಲ್ಲ.
ಒಂದು ಗಂಟೆಗೆ ಹೋದರೆ ಊಟಕ್ಕೆ ಹೋಗಿದ್ದಾರೆಂದು ವರದಿ.
ಮೂರು ಗಂಟೆಗೆ ಹೋದರೆ ಈಗ ಬರುವರೆಂಬ ತಿಳುವಳಿಕೆ.
ನಾಲ್ಕು ಗಂಟೆಗೆ ಹೋದರೆ ಸೀಟಿನಲ್ಲಿಲ್ಲ.
ನಾಲ್ಕುವರೆ ಗಂಟೆಗೆ ಹೋದರೆ,
ಸಾಹೇಬರ ಹತ್ತಿರ ಇದ್ದಾರೆಂಬ ಸಮಾಚಾರ.
ಐದು ಗಂಟೆಗೆ ಹೋದರೆ ಮನೆಗೆ ಹೋದರೆಂಬ ಹೇಳಿಕೆ.
ಕೆಲಸ ಮಾಡುವ ರೀತಿ ಇದು ನಮ್ಮ ಕಛೇರಿಗಳು.
ಅಣುಬಾಂಬು ಸಿಡಿದರೂ ಮತ್ತೆ ಚೇತರಿಸಿ
ಕೊಂಡಿತು ಜಪಾನ್, ಕರ್ತವ್ಯ ನಿಷ್ಠೆಯಿಂದ.
ಕಾಯಕವೇ ಕೈಲಾಸವೆಂದು ಸಾರಿದ
ಈ ನಾಡಿನಲ್ಲಿ ಕರ್ತವ್ಯಚ್ಯುತಿಯ ಪರಮಾವಧಿ.
ಇದರಿಂದಲಾಗುವದು ನಮ್ಮ ದೇಶದ ಸಮಾಧಿ
ಇಂಥ ಕರ್ತವ್ಯ ಭ್ರಷ್ಟರಿಂದ ಇದನ್ನು ಕಾಪಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೭

ನಾನೊಂದ ಬಗೆದರೆ, ತಾನೊಂದು ಬಗೆವುದು.
ಮನಸ್ಸು ಯೋಚಿಸುವ ರೀತಿಯೆ ಬೇರೆ.
ಆತ್ಮದ ಅಂತಸ್ಫುರಣವೇ ಬೇರೆ.
ಮನಸ್ಸು ಆತ್ಮದ ಕರೆಗೆ ಒಗೊಡಲಿ,
ಇವುಗಳ ಚಿಂತನೆಯಲ್ಲಿ ಮೂಡಿ ಬರಲಿ ಸಮನ್ವಯ.
ಹೊರಹೊಮ್ಮುವದು ಆಗ ಬಾಳನೀತಿ
ದಿವ್ಯಬಾಳಿನ ರೀತಿ.
ಇದನ್ನು ಸಾಧಿಸಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೮

ನಿರ್ಮಲ ಮನವೇ ಗಂಗಾಜಲ,
ಸದ್ಗುಣವೇ ಪುಷ್ಪಾಹಾರ.
ಸದ್ಭಾವವೇ ಸುಗಂಧ
ಸುಜ್ಞಾನವೇ ವಿಭೂತಿ.
ನಿನ್ನ ಧ್ಯಾನವೇ ಕರ್ಪೂರದಾರತಿ.
ಇಂಥ ಪೂಜೆಗಲ್ಲದೆ
ಡಾಂಭಿಕ ವೈಭವದ ಪೂಜೆಗೆ ಮೆಚ್ಚ
ನಮ್ಮ ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೪೯

ಓದು ಒಕ್ಕಾಲು, ಬುದ್ಧಿ ಮುಕ್ಕಾಲು,
ಇದ ಮನಗಾಣಬೇಕಯ್ಯ.
ಓದಿಲ್ಲದ ಹೈದರಅಲಿ ಆಳಿದ ರಾಜ್ಯವನು.
ಓದಿಲ್ಲದ ಅನುಭಾವಿಗಳು,
ಉದ್ಧರಿಸಿದರಯ್ಯ ಜಗವನು.
ಗಿಳಿಯೂ ಓದಬಲ್ಲದಯ್ಯ;
ಓದು ಗಿಳಿಪಾಠವಾಗದಿರಲಿ
ಸಮಸ್ಯೆಗಳಿಗೆ ಪರಿಹಾರ ತೋರಿಸುವ ಓದಾಗಲಿ
ಜೀವನ ರೂಪಿಸುವ ಓದಾಗಲಿ
ಓದಿನ ಬೆಳಕಿನಲಿ ಬಾಳದಾರಿ ಕಾಣಿಸಲಿ

ಇಂಥ ಓದು ಇಂದು ಬೇಕಾಗಿದೆಯಯ್ಯಾ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೦

ಭೂಮಿ ಆಕಾಶಗಳ ಸಂಗಮ.
ಇದು ಭೂಮಿಯ ಅಂಚಲ್ಲ.
ಆಕಾಶದ ಕೊನೆಯಲ್ಲ.
ಭೂಮಿಯ ಸೀಮೆಯನ್ನೇನೊ
ಕಂಡುಹಿಡಿಯಿತು ವಿಜ್ಞಾನ,
ಆಕಾಶದ ಸೀಮೆ ಸಿಕ್ಕೀತೆ ಅದಕೆ?
ಅದು ಸಿಗುವದೂ ಇಲ್ಲ.
ನಿನ್ನ ಸೀಮೆ ಸಿಕ್ಕೆಲ್ಲಿ ಸಿಗುವದೂ ಇಲ್ಲ,
ನೀನು ಸೀಮಾತೀತ, ನೀನು ಅಜ್ಞೇಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೧

ನೀನು ಜಗವ ನಿರ್ಮಿಸಿದೆ,
ಅಲ್ಲಲ್ಲಿ, ಜಗವೇ ನೀನಾದೆ,
ನೀನು ಸೃಷ್ಟಿಸಿದ ಮಾನವ ನಿನ್ನನ್ನು ಸೃಷ್ಟಿಸಿದ,
ಸೃಷ್ಟಿಸಿ ನಿನ್ನನ್ನು ಬಂಧನದಲ್ಲಿಟ್ಟ.
ನಿನ್ನ ಹೆಸರಿನ ಮೇಲೆ ಜಾತಿಮತ
ಪಂಥಗಳನ್ನು ಕಟ್ಟಿದ.
ಕವಿಯಿತು ಅಜ್ಞಾನದ ಕತ್ತಲೆ
ಈ ಕತ್ತಲೆಯಲಿ ಕಾಣದಾದೆ ನೀನು
ಈ ಅಂಧಕಾರವನ್ನು ಹೊಡೆದೋಡಿಸಿ
ನಿನ್ನ ನಿಜ ಸ್ವರೂಪವನು ತೋರಿಸು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೨

ಆಕಾಶದ ವಾತಾವರಣವೊಂದು
ವಾಯುವಿನ ಸಮುದ್ರವಯ್ಯ.
ವಿಮಾನ ಇದರಲ್ಲಿ ಮೀನಿನಂತೆ
ಈಜುವದಯ್ಯ.

ವಿಮಾನದಲಿ ಎತ್ತರದಲಿ
ಮಾನವ ಹಾರಾಡುವನಯ್ಯ.
ಬರೀ ದೇಹ ಹಾರಾಡಿದರೇನಾಯಿತು?
ಆತ್ಮವೂ ಹಾರಾಡಬೇಕಯ್ಯ ಎತ್ತರದಲಿ.
ಇದು ದಿವ್ಯ ಜೀವನದ ಪರಿಯಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೩

ಏನೀ ಪೃಥ್ವಿ, ಸೂರ್ಯ ಚಂದ್ರಾದಿಗಳು!
ಏನೀ ಸೂರ್ಯ ಪರಿವಾರಾದಿಗಳು!
ಏನೀ ಭೂಕಂಪ ಚಂಡಮಾರುತ ಜಲಪ್ರಳಯಾದಿಗಳು!
ಏನೀ ಧೂಮಕೇತು ಉಲ್ಕಾಪಾತಗಳು!
ಏನೀ ನಿಹಾರಿಕೆ, ಕಾಳರಂಧ್ರಗಳು!
ಏನೀ ನಕ್ಷತ್ರ, ಬೆಳಕಿನ ಮೋಡಗಳು!
ಈ ಅನಂತ ಬಯಲೇನ್
ಲೀಲೆಯಲ್ಲಿದು ವಿಜ್ಞಾನ ಲೋಕದ
ಲೀಲೆಯಿದು ಪರತತ್ವದ, ನಿನ್ನ ಲೀಲೆಯಿದು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ.

೫೪

ಜೀವವೊಂದು ನಿರಂತರ ಪ್ರವಾಹ,
ಹರಿಯುತ್ತದೆ ಇದು ನದಿ ಹರಿದಂತೆ,
ಇದರ ಉಗಮ ಇನ್ನೂ ನಿಗೂಢ!
ಇದರ ಅಂತ್ಯ ಒಡೆಯಲಾರದ ಒಗಟು!
ಹುಟ್ಟು ಸಾವುಗಳು ಇದರ ಮೈಲುಗಲ್ಲುಗಳು,
ಜೀವದೇಹದಿಂದ ಬಿಡುಗಡೆಯಾದಾಗ ಸಾವು,
ಮತ್ತೊಂದು ದೇಹವನ್ನು ಪ್ರವೇಶಿಸಿದಾಗ ಹುಟ್ಟು,
ಹುಟ್ಟು ಸಾವುಗಳು ನೆಪ ಮಾತ್ರ,
ಜೀವದ ಪ್ರಯಾಣ ಸಾಗಿಯೇ ಇದೆ.
ಹುಟ್ಟು ಸಾವುಗಳ ಮಧ್ಯ ಈ ಜೀವನ, ಇಲ್ಲಿ
ಜನಮೆಚ್ಚಿ ನಡೆಯದೆ ಮನಮೆಚ್ಚಿ ನಡೆದು
ನಿನ್ನ ಸೇರಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೫

ಕಂಬಗಳಾಧಾರವಿಲ್ಲದೆ
ನೀಲಾಂಬರವ ನಿರ್ಮಿಸಿದೆ.
ಚಾಲಕನಿಲ್ಲದೆ ಚಲಿಸುವ ಮೋಡಗಳ ನಿರ್ಮಿಸಿದೆ.
ಸೂರ್ಯಕಿರಣಗಳ ತೀವ್ರತೆ
ಜೀವಿಗಳನು ಸುಡದಿರಲೆಂದು
ಮೇಲೆ ಓಝೋನು ಪರದೆಯನ್ನು ನಿರ್ಮಿಸಿದೆ.
ಆಮ್ಲಜನಕದ ತೀವ್ರತೆ ಉಸಿರಾಟಕೆ ಸಲ್ಲದೆಂದು
ಸಾರಜನಕವನ್ನು ನಿರ್ಮಿಸಿದೆ.
ನೀನು ದಯಾಸಿಂಧು, ಅಲ್ಲವೆ?
ಇದಕೆ ಇಷ್ಟು ಸಾಕ್ಷಿಗಳು ಸಾಕಲ್ಲವೆ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೬

ಏನದ್ಭುತವೀ ನಿನ್ನ ಭೂಗೋಳ!
ಒಂದು ಕಡೆ ಕುದಿಸುವ ಬಿಸಿಲಿದ್ದರೆ
ಇನ್ನೊಂದು ಕಡೆ ಹೆಪ್ಪುಗಟ್ಟುವ ತಂಪು!
ಆದರೂ ಒಳಗೊಳಗೆ ಏನೋ ಇಂಪು.
ಎಲ್ಲವೂ ಒಂದು ನಿಯಮಕ್ಕಧೀನ
ಮಾನವನಿಗೆ ನಿನ್ನ ನಿಯಮಗಳನ್ನರಿಯುವ ಸಾಹಸ
ನಿಯಮವನ್ನವನರಿಯಬಹುದು, ಮುರಿಯಲಾರ.
ಇದು ನಿನ್ನ ಸೃಷ್ಟಿಯಿಂದ ಅವನು ಕಲಿತ ಪಾಠ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೭

ಎತ್ತಿನ ಬಂಡಿಯ ವೇಗ ಗಂಟೆಗೆ ಮೂರು ಮೈಲು
ಬಸ್ಸಿನ ಓಟ ಗಂಟೆಗೆ ಮೂವತ್ತು ಮೈಲು.
ವಿಮಾನದ ಓಟ ಗಂಟೆಗೆ ಆರುನೂರು ಮೈಲು.
ಬೆಳಕಿನ ವೇಗ ಗಂಟೆಗೆ ಅರವತ್ತಾರು ಕೋಟಿ
ತೊಂಬತ್ತಾರು ಲಕ್ಷ ಮೈಲು.
ಮನಸಿನ ವೇಗ ಅಳೆದವರಿಲ್ಲ,
ಅದು ಅಳತೆಗೆ ಸಿಕ್ಕುವದಿಲ್ಲ.
ಇದು ನಿನ್ನಲ್ಲಿ ಸಿಲುಕಿದರೆ

ನಾನೀನೆಂಬ ಭೇದವಳಿವುದಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೮

ವನದ ನೀರವತೆ,
ಮಂದ ಮಾರುತ, ಹೂಬಿಸಿಲು,
ಮೌನಗೀತೆ ಹಾಡುತ್ತಿತ್ತು.
ಏನನ್ನೋ ಹೇಳುತ್ತಿತ್ತು.
ಕೇಳುತ್ತ ಕೇಳುತ್ತ ಮನಸ್ಸು
ಬಯಲಾಚೆ ವಿಹರಿಸುತ್ತಿತ್ತು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೫೯

ಕಾಲ, ಪ್ರವಾಹ ಹರಿಯುತ್ತಲೇ ಇದೆ
ಕಾಯದದು ಯಾರಿಗಾಗಿ.
ಯಾರ ಮರ್ಜಿಯನೂ ಹಿಡಿಯದಿದು.
ಗ್ರಹಚಂದ್ರ ನಕ್ಷತ್ರಗಳಿಲ್ಲದಾಗ,
ಈ ವಿಶ್ವರಚನೆಯಾಗದಾಗ,
ಘಟನೆಗಳು ನಡೆಯದಾಗ,
ನೀನೆಲ್ಲಿದ್ದೆ ಕಾಲವೆ?
ವಿಶ್ವದ ಹುಟ್ಟು ಸಾವುಗಳು ನಡೆಯುತ್ತಲೇ ಇವೆ.
ಕಾಲ ಪ್ರವಾಹ ಹರಿಯುತ್ತಲೇ ಇದೆ.
ವಿಶ್ವಕ್ಕೂ ಕಾಲಕ್ಕೂ ಅವಿನಾಭಾವ ಸಂಬಂಧ
ವಿಶ್ವ ಹಿಂದೆಯೂ ಇತ್ತು, ಇಂದೂ ಇದೆ.
ಮುಂದೆಯೂ ಇರುವದು
ಸ್ಥಲ ಕಾಲಗಳ ಮುಂದುವರಿಕೆಯೇ ವಿಶ್ವವಲ್ಲವೆ?
ಇದು ನಿನ್ನ ನಿರಂತರ ಲೀಲೆಯಲ್ಲವೆ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬೦

ವಿಮಾನ ನೀಲಾಂಬರದಲ್ಲಿ ಹಾರುತ್ತಿತ್ತು.
ಮೋಡದ ಬೆಟ್ಟಗಳ ಸಾಲು ಕಾಣುತ್ತಿತ್ತು.

ಮೋಡದ ಅರಣ್ಯವೊಂದು ಶೋಭಿಸುತ್ತಿತ್ತು.
ಮತ್ತೆ ನೋಡಿದಾಗ ಯಾರೊ ಬಂಡೆಗಳನ್ನ ಹಾಸಿದಂತಿತ್ತು.
ಆಧಾರವಿಲ್ಲದೆ ಈ ಬೆಟ್ಟಗಳ ರಚಿಸಿದವರಾರು?
ಭೂಮಿ ಇಲ್ಲದೆ ಈ ಅರಣ್ಯವ ನಿರ್ಮಿಸಿದವರಾರು?
ಬಯಲಲ್ಲಿ ಈ ಬಂಡೆಗಳ ಹಾಸಿದವರಾರು?
ಇಂಥ ಅದ್ಭುತಗಳು ಹಾಸಲುಂಟು ಹೊದೆಯಲುಂಟು
ನಿನ್ನೀ ವಿಚಿತ್ರ ಸೃಷ್ಟಿಯಲ್ಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬೧

ಅವಳು ಚಂದ್ರಮುಖಿ,
ಕಂಗಳಲಿ ಬೆಳದಿಂಗಳು,
ಮೌನದಲ್ಲಿ ಮಾತನಾಡಿದಳು.
ಅವಳು ಪ್ರತಿಭೆಯೇ ಇರಬೇಕು,
ಇಷ್ಟಲಿಂಗರೂಪಿ ಹಂಪೆಯ
ವಿರೂಪಾಕ್ಷೇಶ್ವರ, ಅವಳು
ನಿನ್ನ ಚಿತ್ತೇ ಇರಬೇಕು.
ಅವಳು ನಿನ್ನ ಆನಂದವೇ ಇರಬೇಕು.

೬೨

ಕಾಲ ಓಡುತಿದೆ ನೋಡಿದಿರಾ!
ಮಾನವಕೂಸಿನ ತೊಟ್ಟಿಲ ತೂಗಿ,
ಸಾವಿರಾರು ನಾಗರಿಕತೆಗಳ ಸೃಷ್ಟಿಸಿ ನೋಡಿ,
ರಾಜ್ಯಸಾಮ್ರಾಜ್ಯಗಳ ಕಟ್ಟುತಸಾಗಿ,
ನೂರಾರು ಧರ್ಮಗಳ ರೂವಾರಿಯಾಗಿ,
ಜ್ಞಾನವಿಜ್ಞಾನಗಳ ಬೆಳಸುತ ಸಾಗಿ,
ನಾನೀನೆಂಬಹಂಕಾರದಿ ಬೀಗಿ,
ಯುದ್ಧಗಳನೇಕ ನೋಡುತಸಾಗಿ,
ಮಾನವತಾ ಭಸ್ಮಾಸುರನಾದುದ ನೋಡಿ
ಧರ್ಮದೇವರುಗಳ ಸೃಷ್ಟಿಸುತ ಸಾಗಿ
ಮಾನವ ತಾ ದೇವನಾಗುವದ ನೋಡಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

ನಿನ್ನ ಕೀರ್ತಿಪತಾಕೆಯ ಮೆರೆಯುತ ಸಾಗಿ,
ಕಾಲ ಓಡುತಿದೆ ನೋಡಿದಿರಾ!

೬೩

ಆಕಾಶವಾಣಿ ನುಡಿಯುತ್ತಿತ್ತು
ಪೌರಾಣಿಕ ಯುಗದಲ್ಲಿ,
ನುಡಿಯುತಿದೆ ಇಂದು ರೇಡಿಯೋ ವಾಣಿ, ಟಿ.ವಿ. ವಾಣಿ.
ಮನಸಿನಲಿ ಮೂಡಿದುದು ಮನಸಿಗೆ
ತಲುಪುತ್ತಿತ್ತು ಆಗ,
ವೈಯರ್‌ಲೆಸ್ ಉಪಕರಣ ಬೇಕದಕ್ಕೀಗ.
ಕಂಪ್ಯೂಟರ್ ಈ ಯುಗದ ಕಲ್ಪವೃಕ್ಷ.
ಬೇಡಿದವರಿಗೆ ಬೇಡಿದುದನು ಕೊಡುವದು,
ಕ್ಷಣಾರ್ಧದಲಿಂದು.
ಏನಬೇಕಾದರೂ ಪಡೆಯಬಹುದು
ಉಪಕರಣಗಳಿಂದೀಯಂತ್ರ ಯುಗದಲ್ಲಿ.
ಮನಃಶಾಂತಿ ಕೊಡುವ ಉಪಕರಣವಿನ್ನೂ ಬಂದಿಲ್ಲ.
ಧರ್ಮಕ್ಕೆ ಮೊರೆ ಹೋಗಬೇಕು ಇದಕಾಗಿ.
ಮನುಕುಲ ಕೇಳುತಲಿದೆಯಿಂದು ಶಿರಬಾಗಿ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನೀನಿದನು ದಯಪಾಲಿಸು, ಮನುಕುಲವನನುಗ್ರಹಿಸು.

೬೪

ನಾನೊಂದು ಕನಸಕಂಡೆ.
ಮಾನವರು ಜಾತಿಭೇದವ ಮರೆತು
ಬಂಧುಗಳಾದುದ ಕಂಡೆ
ರಾಜಕಾರಣಿಗಳು ಭ್ರಷ್ಟಾಚಾರವ ತೊರೆದು
ನೀತಿವಂತರಾದುದಕಂಡೆ.
ವ್ಯಾಪಾರಿಗಳು ಕಲಬೆರಕೆ ಕಳ್ಳ ವ್ಯಾಪಾರಬಿಟ್ಟು
ಪ್ರಾಮಾಣಿಕರಾದುದ ಕಂಡೆ.
ವಿಜ್ಞಾನಿಗಳು ವಿಧ್ವಂಸಕ ಶಸ್ತ್ರ ನೀತಿಯ ಬಿಟ್ಟು
ಮಾನವರಾದುದ ಕಂಡೆ.
ಶಿಕ್ಷಣ ಸಂಸ್ಥೆಗಳು ವ್ಯಾಪಾರೀಕರಣ ಬಿಟ್ಟು
ಶಾರದೆಯ ಉಪಾಸಕರಾದುದ ಕಂಡೆ.

ಶ್ರೀಮಂತರು ಬಂಡವಾಳಶಾಹಿತ್ವ ತೊರೆದು
ಬಡವರ ಟ್ರಸ್ಟಿಗಳಾದುದ ಕಂಡೆ.
ಮಠದ ಸ್ವಾಮಿಗಳು ಡಾಂಭಿಕತನಬಿಟ್ಟು
ಅನುಭಾವಿಗಳಾದುದಕಂಡೆ.
ವಿದ್ಯಾರ್ಥಿಗಳು ಟಿ.ವಿ. ಸಿನೆಮಾ ಮೋಹಬಿಟ್ಟು
ಸರಸ್ವತೀ ಪುತ್ರರಾದುದಕಂಡೆ.
ಈ ನನ್ನ ಕನಸು ನನಸಾಗುವಂತೆ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬೫

ಸುಶಿಕ್ಷಿತ ನಾಗರಿಕರು
ಪ್ರಜಾಪ್ರಭುತ್ವದ ಅಸ್ತಿಯಯ್ಯ.
ಅಕ್ಷರಜ್ಞಾನವಿಲ್ಲದೆ ಶಿಕ್ಷಣವೆಂತು ಸಾಧ್ಯವಯ್ಯ?
ಇಂದು ನಿರಕ್ಷರಕುಕ್ಷಿಗಳ ಸಂಖ್ಯೆಯೇ ಅಧಿಕವಯ್ಯ.
ಸಾಕ್ಷರತೆ ಇಂದಿನ ಮೂಲಭೂತ ಅವಶ್ಯಕತೆಯಯ್ಯ.
ವಯಸ್ಕರ ಶಿಕ್ಷಣ ಸಮಾರೋಪಾದಿಯಲಿ ನಡೆಯಬೇಕಯ್ಯ.
ಕಡ್ಡಾಯ ಪ್ರಾಥಮಿಕ ಶಿಕ್ಷಣವಿದಕೆ ಶಾಶ್ವತ ಪರಿಹಾರವಯ್ಯ.
ಇದಿಲ್ಲದ ಪ್ರಜಾಪ್ರಭುತ್ವ ಆತ್ಮವಿಲ್ಲದ ದೇಹದಂತಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬೬

ಹಿಂದೂ ಸಂಸ್ಕೃತಿಯೆಂಬುದೊಂದೇ
ಧರ್ಮದ ಸಂಸ್ಕೃತಿಯಲ್ಲವಯ್ಯ.
ಅದು ಕೇವಲ ವೈದಿಕ ಸಂಸ್ಕೃತಿಯಂತೂ
ಅಲ್ಲವೇ ಅಲ್ಲವಯ್ಯ.
ಅದು ಭಾರತೀಯ ಜೀವನದ ರೀತಿ ನೀತಿಯಯ್ಯ
ಅದು ಎಲ್ಲ ಧರ್ಮಗಳ ಮೀರಿನಿಂತ ಸಂಸ್ಕೃತಿಯಯ್ಯ.
ಇದ ತಿಳಿದು ನಮ್ಮ ದೇಶವನುಳಿಸಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬೭

ಹಿಂದುಗಳಿಗೆ ಮನುಸ್ಮೃತಿ
ಮುಸ್ಲಿಂರಿಗೆ ಕುರಾನ್

ಕ್ರೈಸ್ತರಿಗೆ ಬೈಬಲ್
ನಮ್ಮ ಕಾನೂನಿಗೆ ಆಧಾರಗಳಯ್ಯ.
ಭಾರತ ಜ್ಯಾತ್ಯಾತೀತ ರಾಷ್ಟ್ರವಯ್ಯ.
ಜಾತ್ಯಾಧಾರಿತ ಕಾನೂನು ಬೇಡವಯ್ಯ.
ಭಾರತೀಯರೆಲ್ಲರಿಗೆ ಒಂದೇ ಕಾನೂನು ಬೇಕಯ್ಯ.
ಇದು ನಮ್ಮ ರಾಷ್ಟ್ರದೈಕ್ಯತೆಯ ಸೂತ್ರವಾಗಬೇಕಯ್ಯ.
ರಾಷ್ಟ್ರವೇ ಒಂದು ಧರ್ಮವಾಗಬೇಕಯ್ಯ.
ಅವರವರ ದೇವರು, ಅವರವರ ಸಂಪ್ರದಾಯ
ಅವರವರಿಗಿರಲಿ, ರಾಷ್ಟ್ರ ಒಂದೇಯಾಗಿ ಉಳಿಯಬೇಕಯ್ಯ.
ಇದು ಸಮೃದ್ಧ ಭಾರತದ ಮೂಲ ಸೂತ್ರವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬೮

ಭಾರತ ಹಲವಾರು ಭಾಷೆಗಳ ಬೀಡು.
ಹಲವಾರು ಧರ್ಮಗಳ ನೆಲೆವೀಡು.
ಅನೇಕತೆಯಲ್ಲಿ ಏಕತೆಯೇ ಇದುರುಸಿರು.
ಸಾಂಸ್ಕೃತಿಕ ಏಕತೆಯೇ ಇದರಿನ್ನೊಂದು ಹೆಸರು.
ಇದನುಳಿಸಬೇಕು ಬೆಳಸಬೇಕು.
ಮಾನವ ಕಲ್ಯಾಣವೇ ಎಲ್ಲ ಧರ್ಮಗಳ ಗುರಿ.
ದಯವೇ ಎಲ್ಲ ಧರ್ಮಗಳ ಮೂಲ.
ಭಾಷೆ ಧರ್ಮಗಳ ದೇಹ ಮಾತ್ರ ಬೇರೆ ಬೇರೆ, ಆತ್ಮ ಒಂದೇ.
ಇದ ನಂಬಬೇಕಯ್ಯ ಭಾರತೀಯತೆಯ ಉಳಿಸಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೬೯

ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ,
ಅವರವರ ಭಾಷೆಯಲ್ಲಿ ಅವರವರ ಮಕ್ಕಳಿಗೆ
ಪ್ರಾಥಮಿಕ ಶಿಕ್ಷಣ.
ಪರಿಸರದ ಭಾಷೆಯಲ್ಲಿ ಪ್ರೌಢ ಶಿಕ್ಷಣ.
ಅಂತರ ರಾಷ್ಟ್ರೀಯ ಭಾಷೆಯಲ್ಲಿ ಉಚ್ಚ ಶಿಕ್ಷಣ.
ಇದು ಗಾಂಧೀಜಿಯ ತ್ರಿ ಭಾಷಾ ಸೂತ್ರವಯ್ಯ.
ರಾಷ್ಟ್ರಭಾಷೆಯನೆಲ್ಲರೂ ಕಲಿಯಬೇಕಯ್ಯ.
ಈ ಭಾಷಾ ನೀತಿಯಿಂದ ರಾಷ್ಟ್ರದ ಉದ್ಧಾರವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೦

ಸಂಸಾರದಲ್ಲಿ ಮುಳಗಲೂ ಬೇಡ.
ಸಂಸಾರವನ್ನೂ ಬಿಡಲೂ ಬೇಡ.
ಬಂದಂತದನು ಸ್ವೀಕರಿಸಿ,
ಇದ್ದರೂ ಇಲ್ಲದಂತಿದ್ದು,
ಇದರ ಮಣಿಹ ಪೂರೈಸಬೇಕಯ್ಯ
ಇದು ನಿನ್ನ ಶರಣರು ಕಲಿಸಿದ ಪಾಠವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೧

ತನ್ನ ಕೆಲಸದಲ್ಲಿ ತಾನು ತಾದ್ಯಾತ್ಮನಾಗುವದೇ ಯೋಗವಯ್ಯ.
ತನ್ನ ಕೆಲಸದಲ್ಲಿ ತಾನು ನಿಪುಣತೆಯನ್ನು ಸಾಧಿಸುವದೇ ಯೋಗವಯ್ಯ.
ತನ್ನ ಕೆಲಸದಿಂದ ತನ್ನ ಕುಟುಂಬವನುದ್ಧರಿಸುವದೇ ಯೋಗವಯ್ಯ.
ತನ್ನ ಕೆಲಸದಿಂದ ತಾನು ಮನುಕುಲಕೆ ಬೇಕಾಗುವದೇ ಯೋಗವಯ್ಯ.
ತನ್ನ ಕೆಲಸದಿಂದ ತಾನು ನಿನ್ನ ಸೇರುವದೇ ಯೋಗವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೨

ದೇಹಕ್ಕೆ ವಯಸ್ಸಾದರೇನು?
ಮನಕ್ಕೆ ವಯಸ್ಸಾಗದನ್ನಕ್ಕರ.
ದೇಹ ಬೆಳೆದರೇನು? ಮನಸ್ಸು ಬೆಳೆಯದನ್ನಕ್ಕರ.
ಇವೆರಡೂ ಬೆಳೆಯಬೇಕು ಸಮಾನವಾಗಿ,
ವ್ಯಕ್ತಿತ್ವದ ಪರಿಪೂರ್ಣತೆಗಾಗಿ.
ಇದು ಸಾಧಿಸಿ ಇಲ್ಲಿಯೂ ಸಲ್ಲಬೇಕು.
ಅಲ್ಲಿಯೂ ಸಲ್ಲಬೇಕು.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೩

ತಲೆಯೆತ್ತಿ ನೋಡಿದರೆ ಮೇಲೆ ನೀಲಾಕಾಶ.
ಇದು ಆದಿಮಾನವನ ಲಿಂಗಾಕಾಶ.
ಇದೇ ಅವನ ಪರಿಕಲ್ಪನೆಯ ದೇವರು.
ಇದು ಅಂದಿನ ಮಾನವ ಬುದ್ಧಿಗೆ ತಿಳಿದ ರಹಸ್ಯ.

ಇಂದಿಗೂ ಪ್ರಸ್ತುತ ಈ ರಹಸ್ಯ.
ಸತ್ಯಸತ್ಯ ಇಂದಿಗೂ ಆಕಾಶವೇ ಲಿಂಗ.
ಪೃಥ್ವಿಯೇ ಪೀಠ.
ಇದು ನಮಗೆ ನೀ ಕಲಿಸಿದ ಪಾಠ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೪

ಭೂಗ್ರಹವೊಂದು ವಿಶ್ವದ ಕೇಂದ್ರಸ್ಥಾನ;
ಇತ್ತದಕೆ ಹಿಂದೆ ಸ್ಥಾನಮಾನ.
ಇಂದಿಗೂ ಉಳಿದಿದೆ ಆ ಸ್ಥಾನಮಾನ.
ಪ್ರಾಣಗಳಿರುವ ಇನ್ನೊಂದು ಗ್ರಹ ಸಿಕ್ಕಿಲ್ಲ,
ಸ್ವರ್ಗನರಕಗಳು ಬೇರೆ ಎಲ್ಲಿಯೂ ಇಲ್ಲ.
ಆಕಾಶದಲ್ಲಿ ಸ್ವರ್ಗ, ಪಾತಾಳದಲ್ಲಿ ನರಕ,
ವಿಜ್ಞಾನದ ಶೋಧನೆಗಳಿಗಿವು ಸಿಕ್ಕಲ್ಲ.
ಪುರಾಣದ ಹಿಂದಿನ ಮಾತು ಸತ್ಯವಲ್ಲ.
ಇಲ್ಲಿಯೇ ಸ್ವರ್ಗ - ಇಲ್ಲಿಯೇ ನರಕ.
ಸತ್ಯಶುದ್ಧ ನಡತೆಯೇ ಸ್ವರ್ಗ.
ದಾರಿತಪ್ಪಿ ನಡೆದರದೇ ನರಕ.
ಈ ತಿಳುವಳಿಕೆ ಸಾಲದೆ?
ಈ ಆಚಾರ ಸಾಲದೆ?
ಸಂಸಾರ ಶರಧಿಯ ದಾಟಲಾಗದೆ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೫

ಇಂದು ಇಡೀ ಭೂಗೋಳ ಒಂದು ಹಳ್ಳಿಯಷ್ಟು ಚಿಕ್ಕದು,
ಸಂಚಾರ ಸಂಪರ್ಕ ಮಾಧ್ಯಮಗಳಿಂದ ಸಾಧ್ಯವಾಗಿಹುದಿದು.
ಇಂದು ವಿಶ್ವವೇ ಒಂದು ಕುಟುಂಬವಂತೆ.
ವಿಶ್ವದ ರಾಷ್ಟ್ರಗಳೇ ಕುಟುಂಬದ ಸದಸ್ಯರಂತೆ
ಈ ಸದಸ್ಯರಲ್ಲಿ ಬಾಂಧವ್ಯದ ಬೆಸುಗೆ ಭದ್ರವಾಗಬೇಕು.
ಶ್ರೀಮಂತ ರಾಷ್ಟ್ರಗಳು ಬಡರಾಷ್ಟ್ರಗಳಿಗೆ ನೆರವಾಗಬೇಕು.
ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು
ಇದು ವಿಶ್ವಸೂತ್ರವಾಗಬೇಕು.
ಎಲ್ಲರಿಗೂ ನೆಮ್ಮದಿ ಸಿಗಬೇಕು.

ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ಈ ಬುದ್ಧಿಯ ನೀನೆಲ್ಲರಿಗೂ ಕೊಡಬೇಕು.

೭೬

ಭಾರತವೊಂದು ಪುಟ್ಟ ವಿಶ್ವವಯ್ಯ,
ವಿಶ್ವದೆಲ್ಲ ಹವಾಮಾನ ಇಲ್ಲಿಹವಯ್ಯ.
ಸಹಾರಾದ ಕಡು ಬೇಸಿಗೆ
ರಾಜಸ್ಥಾನದ ಮರಳು ಗಾಡಿಲ್ಲಿ.
ಸ್ವಿಜರ್‌ಲ್ಯಾಂಡಿನ ಹಿಮಗಾಲ ಕಾಶ್ಮೀರದಲ್ಲಿ.
ಮುಗಿಲ ಮುಟ್ಟುವ ಹಿಮಾಚಲ,
ದ್ವೀಪಗಳ ಕಡಲತೀರ,
ಗಂಗಾ ಕಾವೇರಿಗಳ ನೆಲೆವೀಡಯ್ಯ.
ಆಫ್ರಿಕಾದಂಥ ಕಪ್ಪು ಜನ,
ಯುರೋಪಿನಂಥ ಬಿಳಿಯ ಜನ,
ಪ್ಯಾರಿಸನಂಥ ಫ್ಯಾಶನ್ ಪಟ್ಟಣಗಳು,
ಮ್ಯಾಂಚಿಸ್ಟರ್‌ನಂಥ ವ್ಯಾಪಾರಿ ಕೇಂದ್ರಗಳು,
ಕೃಷಿ ಕೈಗಾರಿಕೆಗಳು,
ವಿಶ್ವದೆಲ್ಲ ಭಾಷೆಗಳು, ಧರ್ಮಗಳು,
ಎಲ್ಲ ವೇಷಭೂಷಣಗಳಿಲ್ಲಿ.
ಇದು ಬುದ್ಧ ಬಸವಣ್ಣರ ನಾಡು,
ತ್ಯಾಗಯೋಗ ಭೋಗಗಳ ಬೀಡು.
ಇಲ್ಲಿ ಹುಟ್ಟುವುದೇ ಪೂರ್ವಜನ್ಮದ ಪುಣ್ಯ,
ನಾನಿಲ್ಲಿ ಹುಟ್ಟಿದುದು ನಿನ್ನ ಕಾರುಣ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೭

ಕರ್ನಾಟಕವೊಂದು ಪುಟ್ಟ ಭಾರತ.
ಕೊಡಗು ಇಲ್ಲಿಯ ಕಾಶ್ಮೀರ.
ತಲಕಾಡಿದರ ರಾಜಸ್ಥಾನ.
ಮಂಗಳೂರಿದರ ಮುಂಬಯಿ.
ಬೆಂಗಳೂರು ಕರ್ನಾಟಕದ ದೆಹಲಿ.
ಕೃಷ್ಣಾ, ಹಾವೇರಿ, ತುಂಗಭದ್ರ
ನದಿಗಳಿದರ ಗಂಗಾ ಜಮುನಾ

ಬ್ರಹ್ಮಪುತ್ರಗಳಯ್ಯ.
ಎಲ್ಲ ಧರ್ಮಗಳ ಭಾಷೆಗಳ ನೆಲೆವೀಡು,
ಬಸವ ಮಧ್ವರ ನಾಡು,
ಅಲ್ಲಮ, ಚನ್ನಬಸವ, ಅಕ್ಕಮಹಾದೇವಿಗಳ ನೆಲೆವೀಡು.
ಇದು ಭಾರತದ ಸಾರಸರ್ವಸ್ವವಯ್ಯ,
ಇಲ್ಲಿ ಹುಟ್ಟಿದುದೆನ್ನ ಸುಕೃತವಯ್ಯ.
ಇಲ್ಲಿಯ ಸಂಸ್ಕೃತಿ ಎನ್ನಲಿ ನೆಲಸಲಯ್ಯ.
ನಾನಿಲ್ಲಿ ಹುಟ್ಟಿದುದು ಸಾರ್ಥಕವಾಗಲಯ್ಯ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೮

ಈ ಸಂಸಾರವೆಂಬುದೊಂದು ವಸ್ತು ಸಂಗ್ರಹಾಲಯ.
ಇಲ್ಲಿ ಹುಚ್ಚರಿದ್ದಾರೆ, ಜಾಣರಿದ್ದಾರೆ,
ದುಷ್ಟರಿದ್ದಾರೆ, ಶಿಷ್ಟರಿದ್ದಾರೆ, ಸಜ್ಜನರಿದ್ದಾರೆ:
ಶ್ರೀಮಂತರಿದ್ದಾರೆ, ಬಡವರಿದ್ದಾರೆ,
ರೋಗಿಗಳಿದ್ದಾರೆ, ದೃಢಕಾಯರಿದ್ದಾರೆ,
ಕುರೂಪಿಗಳಿದ್ದಾರೆ, ಸ್ಫುರದ್ರೂಪಿಗಳಿದ್ದಾರೆ,
ಮನೆಮುರುಕರಿದ್ದಾರೆ, ಮನೆ ಕಟ್ಟುವವರಿದ್ದಾರೆ,
ನಿನ್ನ ವಿನೋದಕ್ಕಾಗಿ ಸೃಷ್ಟಿಸಿದೆಯಾ ಇದನು?
ಅಲ್ಲಲ್ಲಿ ನೀನು ಏನಾದರು ಆಗಬಹುದೆಂಬುದಕೆ ನಿದರ್ಶನವೇ ಇದು?
ಅದೇನೆ ಇರಲಿ, ನಿನಿಕ್ಕಿದ ತೊಡಕ ನೀನೆ ಬಿಡಿಸಬೇಕಯ್ಯ.
ನೀನೆಲ್ಲರಿಗೆ ಸನ್ಮತಿಯನೀಯಬೇಕಯ್ಯ,
ಕೌಟುಂಬಿಕ ಬಾಂಧವ್ಯದಲ್ಲಿ ಬೆಸೆಯಬೇಕಯ್ಯ,
ಎಲ್ಲರು ನಿನ್ನ ವಿವಿಧ ರೂಪಗಳೆಂಬುದ ತೋರಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೭೯

ಸೂರ್ಯ ಸ್ವಾಭಾವಿಕ ಜಲಜನಕ ಬಾಂಬು.
ಜಲಜನಕ ಬಾಂಬೊಂದು ಕೃತಕಸೂರ್ಯ.
ಸೂರ್ಯನೊಂದು ನಕ್ಷತ್ರ, ನಕ್ಷತ್ರಗಳೆಲ್ಲ ಸೂರ್ಯರೆ,
ನಕ್ಷತ್ರಗಳೆಲ್ಲವೂ ಜಲಜನಕ ಬಾಂಬುಗಳೇ.
ಜಲಜನಕವೇ ಸೂರ್ಯನಿಂಧನ.

ಜಲಜನಕ ಪರಮಾಣುಗಳು ಸಂಧಿಸಿದಾಗ
ನಡೆಯುವುದು ಬೀಜ ಕ್ರಿಯೆ.
ಇದು ಸೃಷ್ಟಿಯ ಮೂಲಕ್ರಿಯೆ.
ಇದರಿಂದಾಗುವುದು ಹೀಲಿಯಮ್
ಮೂಲವಸ್ತು ಸೃಷ್ಟಿ, ಪ್ರಳಯಕಾರಕ ಉಷ್ಣವೃಷ್ಟಿ.
ಬೀಜಕ್ರಿಯೆಯಿಂದಲೇ ನಕ್ಷತ್ರಗಳ ಬೆಳಗು.
ಇದರಿಂದಲೇ ಸೃಷ್ಟಿಯ ಆಗು ಹೋಗು.
ಮಾನವನಿಂದದರ ರಹಸ್ಯ ಸ್ಫೋಟ,
ಜಲಜನಕಬಾಂಬು ರಚಿಸುವವನಿಗಿದಾಯಿತು ಹುಡುಗಾಟ,
ಆಗಬಾರದಾಗಿತ್ತೀ ರಚನೆ, ಮನುಕುಲಕಿದು ವಿನಾಸದ ಸೂಚನೆ.
ಈ ವಿನಾಶದಿಂದ ಮನುಕುಲವ ರಕ್ಷಿಸಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೮೦

ಕಷ್ಟವೇ ಬರಲಿ, ಸುಖವೇ ಬರಲಿ,
ಚಿತ್ತಸ್ವಾಸ್ಥ್ಯವ ಕಾಯ್ದುಕೊಳ್ಳುವದೇ ಸಮತೆ.
ಸ್ತುತಿಬರಲಿ, ನಿಂದೆ ಬರಲಿ, ನಗುನಗುತ ಸ್ವೀಕರಿಸುವದೇ ಸಮತೆ.
ಉರಿಬರಲಿ ಸಿರಿಬರಲಿ,
ತಾನಾತಾನಾಗಿರುವುದೇ ಸಮತೆ.
ಸಮತೆಯನಾಚರಿಸಿ ತೋರಿದರಯ್ಯ ಶರಣರು,
ಇದೆನ್ನ ಹಾಸುಹೊಕ್ಕಾಗುವಂತೆ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೮೧

ಹಿಂಸೆ ಹೇಡಿಗಳ ಅಸ್ತ್ರ
ಆದಿಂದು ಜೀವನಶಾಸ್ತ್ರ
ಅಹಿಂಸೆ ಶೂರರ ಅಸ್ತ್ರ
ಬಾಪೂಜಿ ಕಲಿಸಿದ ಸೂತ್ರ.
ಬಸವ ನಡೆದು ತೋರಿದ ಸೂತ್ರ.
ಬುದ್ಧ ತೋರಿದ ಪಥವಿದು ಏಕಮಾತ್ರ.
ಇದ ಹೇಳುವುದು ನಮ್ಮ ಸಂಸ್ಕೃತಿ ಸಾರಿಸಾರಿ.
ನಾವಾಗುವುದು ಬೇಡ ಮಾರಾಮಾರಿ.
ಎಲ್ಲ ಸಮಸ್ಯೆಗಳಿಗೆ ತೋರುವದಿದು ದಾರಿ.

ಈ ದಾರಿಯಲಿ ನಡೆಯುವ ನಾವೆಲ್ಲ ಸೇರಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೮೨

ನೆಲವೊಂದೇ, ಜಲ ಒಂದೇ,
ಆಕಾಶವೊಂದೇ, ವಾಯುವೊಂದೇ,
ಎಲ್ಲಿದ್ದರೂ ಮಾನವ ಸ್ವಭಾವ ಒಂದೇ.
ದೇಶ ಬೇರೆಯಾದರೇನು?
ಭಾಷೆ ಬೇರೆಯಾದರೇನು?
ವೇಷ ಬೇರೆಯಾದರೇನು?
ನಮ್ಮ ಸಮಸ್ಯೆಗಳೆಲ್ಲ ಒಂದೇ.
ಅವಕೆ ಪರಿಹಾರ ಒಂದೇ.
ಅದು ಮಾನವತೆ, ಅದು ಬೆಳೆಯಲಿಂದೇ,
ನಾವಾಗುವೆವೆಲ್ಲ ಒಂದೇ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೮೩

ಧರ್ಮಕ್ಕೆ ಕರುಣೆಯೇ ಶೃಂಗಾರ,
ಭಕ್ತನಿಗೆ ಶ್ರದ್ಧೆಯೇ ಶೃಂಗಾರ,
ರಾಜನಿಗೆ ಪ್ರಜಾಹಿತವೇ ಶೃಂಗಾರ,
ಪ್ರಜಾಪ್ರಭುತ್ವಕ್ಕೆ ಸಾಕ್ಷರತೆಯೇ ಶೃಂಗಾರ,
ರಾಜಕಾರಣಿಗೆ ನಿಷ್ಠೆಯೇ ಶೃಂಗಾರ,
ವಿದ್ಯಾರ್ಥಿಗೆ ಅಧ್ಯಯನವೇ ಶೃಂಗಾರ,
ಗುರುವಿಗೆ ಶುದ್ಧಿಯೇ ಶೃಂಗಾರ,
ನಮಗೆಂದೆಂದಿಗೂ ದೇಶ ಭಕ್ತಿಯೇ ಶೃಂಗಾರ,
ಎಂದೆಂದಿಗೂ ಎಲ್ಲರಿಗೂ,
ಪ್ರೇಮವೇ ಶೃಂಗಾರ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ಇದನೆಲ್ಲರಿಗೆ ದಯಪಾಲಿಸುವದೇ ನಿನಗೆ ಶೃಂಗಾರ.

೮೪

ಇದು ಭಾಷಣಗಳ ಯುಗ.
ಎಲ್ಲಿ ಕಿವಿಗೊಟ್ಟರೂ ಭಾಷಣಗಳೇ,

ಭಾಷಣ ಭಾಷಣಗಳೆಂದು ಕೇಳುವಕಿವಿಗಿಂಬಿಲ್ಲ.
ಇವ ಕೇಳದಿರುವುದೇ ಲೇಸು.
ಕೇಳುವದನ್ನು ಬಿಟ್ಟುಮಾಡುವದೇ ಲೇಸು.
ಮಾಡುವ ಮಾಟದಲಿ ನೀನಿರುವೆಯಲ್ಲದೆ
ಆಡುಮಾತಿನಲ್ಲಿಲ್ಲ. ಮಾಡದಿರಬೇಡ,
ಮಾಡಿದೆನೆಂದು ಹೇಳಬೇಡ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನಿಂದ ದೂರವಾಗಬೇಡ.

೮೫

ಎಲೊ ಎಲೋ ಮಾನವ ದುರಾಶೆ ಬೇಡವೋ,
ಕಾಳಸಂತೆ ಬೇಡವೋ,
ಕಳ್ಳಸಾಗಾಣಿಕೆ ಬೇಡವೋ,
ಓಟಿನ ವ್ಯಾಪಾರ ಬೇಡವೋ,
ಪಕ್ಷಾಂತರ ಬೇಡವೋ,
ಅಧಿಕಾರದಾಶೆ ಬೇಡವೋ,
ಪರೀಕ್ಷೆಯಲ್ಲಿ ಕಾಪಿ ಹೊಡೆಯುವದು ಬೇಡವೋ,
ನೇಮಕೂಲಿಯ ಬಿಟ್ಟು ಲಂಚಕೊಳ್ಳುವದು ಬೇಡವೋ,
ಸೀಟುಗಳಿಗೆ ಡೊನೇಷನ್ ಬೇಡವೋ,
ಟ್ಯೂಶನ್ ಮಾಡುವುದು ಬೇಡವೋ,
ಭಯೋತ್ಪಾದಕತೆ ಬೇಡವೋ,
ಧರ್ಮದೇವರುಗಳಿಗಾಗಿ ರಕ್ತಪಾತ ಬೇಡವೋ
ಈ ಮರ್ಮವನರಿಯದಿರುವದು ಬೇಡವೋ,
ಅರಿತು ಆಚರಿಸದಿರುವದು ಬೇಡವೋ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನಿಗೆ ಸಲ್ಲದಿರುವದು ಬೇಡವೋ.

೮೬

ಮಾಡುವದು ನನ್ನ ಕರ್ತವ್ಯ.
ಕೊಡುವದು ನಿನ್ನ ಕರ್ತವ್ಯ.
ಮಾಡದಿರುವದು ನನಗೆ ಊನ.
ಕೊಡದಿರುವುದು ನಿನಗೆ ಊನ.

ಮಾಡದೇ ಕೇಳುವದು ನನಗೆ ಊನ
ಮಾಡಿದರೂ ಕೊಡದಿರುವುದು ನಿನಗೆ ಊನ.
ಬೇಡದೆ ಮಾಡಿದರೆ
ಕಾಡದೆ ಕೊಡುವ ನಮ್ಮ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೮೭

ದೇಹವಿರುವ ತನಕ
ಆಹಾರನಿದ್ರೆಗಳು ಬೇಕೇ ಬೇಕು.
ದೇಹವಿರುವ ತನಕ ಕಾಯಕ ದಾಸೋಹ ಬೇಕೇಬೇಕು.
ಎಲ್ಲಿಯೇ ಇರಲಿ, ಹೇಗೇ ಇರಲಿ
ಇವ ಮಾಡಲೇಬೇಕು.
ನಿನ್ನನರಿಯಲಿವ ಮಾಡಲೇಬೇಕು
ಇವ ಮಾಡಿದಡೆ ನೀನೊಲಿವೆಯೆಂಬುದ ನಾಬಲ್ಲೆ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೮೮

ಅಂತರಿಕ್ಷದಲ್ಲಿ ನಕ್ಷತ್ರಗಳು ಕೋಟಿಕೋಟಿ,
ಸೂರ್ಯಕುಟುಂಬಗಳು ಕೋಟಿಕೋಟಿ,
ಗ್ರಹ ಉಪಗ್ರಹಗಳು ಕೋಟಿಕೋಟಿ,
ಜೀವಿಗಳಿರುವದು ಭೂಮಿಯಲೊಂದೇ,
ಬೇರೆ ಗ್ರಹಗಳ ಆ ಜೀವಿಗಳಿದ್ದಾರೆಯೆ?
ಇದರ ಶೋಧನೆಯಾಗಬೇಕಾಗಿದೆಯನ್ನೂ,
ಇದು ಬಹಿರಂಗ ವಿಶ್ವದ ಶೋಧನೆ.
ಅಂತರ್ವಿಶ್ವದ ಶೋಧನೆ ಬೇಡವೆ?
ನಾನಾರೆಂಬುದ ತಿಳಿಯುವದ ಬೇಡವೇ?
ಅಂತರ್ಮೌಲ್ಯಗಳ ಶೋಧನೆ ಬೇಡವೆ?
ಅಂತರಂಗ ಬಹಿರಂಗಗಳೊಂದಾಗುವದು ಬೇಡವೆ?
ಕ್ರಿಯೆ ಆಚಾರಗಳ ಸಮನ್ವಯ ಬೇಡವೆ?
ನಿನ್ನ ಸೇರುವದು ಬೇಡವೆ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

ಪೂರ್ವಕ್ಕೆ ಪಶ್ಚಿಮದ ತಾಂತ್ರಿಕತೆ ಬೇಕು.
ಪಶ್ಚಿಮಕ್ಕೆ ಪೂರ್ವದ ಆಧ್ಯಾತ್ಮಿಕತೆಬೇಕು.
ಪೂರ್ವಕ್ಕೆ ಪಶ್ಚಿಮದ ವೈಜ್ಞಾನಿಕ ದೃಷ್ಟಿಬೇಕು.
ಪಶ್ಚಿಮಕ್ಕೆ ಪೂರ್ವದ ಆಧ್ಯಾತ್ಮಿಕ ದೃಷ್ಟಿಬೇಕು.
ಋಷಿ ವಿಜ್ಞಾನಿ ಐನ್‌ಸ್ಟೈನ್ ಮನಗಂಡ ಮಾತು:
"ವಿಜ್ಞಾನವಿಲ್ಲದ ಧರ್ಮ ಕುರುಡು
ಧರ್ಮವಿಲ್ಲದ ವಿಜ್ಞಾನ ಕುಂಟ"
ಕುರುಡ ಕುಂಟರ ಕೂಡಕೊಳ್ಳುವಿಕೆಬೇಕು,
ಮಾನವ ಸಂಸ್ಕೃತಿ ಸಮೃದ್ಧಿಯಾಗಬೇಕು,
ಜೀವನದಿ ಪರಿಪೂರ್ಣತೆ ತಲೆದೋರಬೇಕು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೯೦

ಭೂಮಿಯ ಮೇಲೆ ಸಸ್ಯಪ್ರಾಣಿಗಳ ಅಗಣಿತಸೃಷ್ಟಿ.
ಇದ ಮೀರಿ ನಡೆದಿದೆ ರಸಾಯನಶಾಸ್ತ್ರದ ವಿಶ್ವಾಮಿತ್ರ ಸೃಷ್ಟಿ.
ನಿಸರ್ಗದ ಮಾದರಿಗೊಂದು ಪ್ರತಿಮಾದರಿ ಸೃಷ್ಟಿ
ಇದು ತಂದಿದೆ ನೆಮ್ಮದಿಗೆ ಭಂಗ.
ನಿಸರ್ಗದಿಂದ ದೂರಸರಿಯುತಿದೆ ಮಾನವ ಜನಾಂಗ.
ನಿಸರ್ಗದ ಮಗು ಮಾನವ, ತಾಯಿ ಮಗುವಿಗೆ ಅನ್ಯೋನ್ಯ ಸಂಬಂಧ,
ಮಾನವಾ, ಮಲತಾಯಿ ಬೆನ್ನ ಬೀಳದಿರು,
ನಿನ್ನಂತರಂಗದ ಶಾಂತಿಗೆ ಭಂಗತರದಿರು,
ನಿಸರ್ಗದ ಕೂಸಾಗಿ ಬಾಳು, ಸುಖಮಯವಾಗುವದು ನಿನ್ನ ಬಾಳು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೯೧

ಹಕ್ಕಿಗಳು ಹಾರಾಡಿದಂತೆ ವಿಮಾನಗಳ ಹಾರಾಟ.
ಈಗ ಭೂಮಿಯಾಗಿದೆ ಒಂದೇ ಊರು.
ವಿವಿಧ ದೇಶಗಳೀಗ ಈ ಊರಿನ ಬೀದಿಗಳು
ಇದ ಮೀರಿ ಬಂದಿದೆ ಕ್ಷಿಪಣಿಗಳ ಹಾರಾಟ,
ಭೂಮಿಯಿಂದ ಚಂದ್ರನಿಗೆ.
ಭೂಮಿಯಿಂದ ಮಂಗಳ ಗ್ರಹಕೆ ಓಟ.

ಬರಲಿದೆ ಇನ್ನು ಸೂರ್ಯನಾಚೆಯ ಗ್ರಹಗಳಿಗೆ ಓಟ.
ಮಾನವ ದೇಹಗಳ ಹಾರಾಟ ಈ ವ್ಯೋಮದಲ್ಲಿ.
ಸಂಕುಚಿತದಾಟ ಮನಗಳಲ್ಲಿ.
ಮನಸ್ಸಿನ ವ್ಯೋಮ ವಿಶಾಲವಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರಸ
ನಿನ್ನ ನಿಲವನರಿಯುವತ್ತ ಸಾಗಲಿ.

೯೨

ಸತ್ಯಶೋಧನೆ ವಿಜ್ಞಾನದ ಗುರಿ,
ಇಂದಿನ ಶೋಧನೆ ದೋಷಪೂರ್ಣವಾದರೆ
ತಿದ್ದಿಕೊಂಡು ಮುನ್ನೆಡೆಯುವದೆ ವಿಜ್ಞಾನ,
ಇದು ವಿಜ್ಞಾನದ ಪ್ರಾಮಾಣಿಕ ಮಾರ್ಗ,
ಧರ್ಮದ ಗುರಿಯು ಸತ್ಯ ಶೋಧನೆಯೇ,
ಅದು ಇಂದು ಹೇಳಿದ್ದನ್ನು ನಾಳೆ ಬಿಟ್ಟುಕೊಡುವದಲ್ಲ,
ಧರ್ಮ ನಿಂತ ನೀರಾಗಬಾರದು,
ಹರಿಯುವ ನದಿಯಾಗಬೇಕು ವಿಜ್ಞಾನದಂತೆ,
ಧರ್ಮ ಉಳಿಯಬೇಕು ಬೆಳೆಯಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೯೩

ಸಮುದ್ರವೊಂದು ಪುಟ್ಟ ವಿಶ್ವ,
ಜಲಚರಗಳಗಾಧ ಸೃಷ್ಟಿ ಅದರೊಡಲಿನಲಿ,
ಅದರಲಿದೆ ಅಚ್ಚರಿಯ ಸಸ್ಯಸಂಪತ್ತು, ಖನಿಜ ಸಂಪತ್ತು,
ಇದೆಲ್ಲವೂ ಇಂದು ಮಾನವನ ಸಂಪತ್ತು,
ಹೆಚ್ಚದಿರಲಿವನ ಸಂಪತ್ತಿನ ದಾಹ,
ಆದಾಗಲಿ ಮಾನವ ಕುಲದ ಸಂಪತ್ತು,
ಪಡೆಯಲದರ ಪ್ರಯೋಜನ ಇಡೀ ಮನುಕುಲ ಸಮೂಹ,
ನೆಮ್ಮದಿ ನೆಲಸಲೆಲ್ಲ ದೇಶದ ಜನರಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನಿನ್ನದು ನಿನ್ನೆಲ್ಲ ಮಕ್ಕಳಿಗೆ ಸಲ್ಲಲಿ.

೯೪

ಕಾಳರಂಧ್ರ (Black hole)ವೊಂದು
ಆಯುಷ್ಯತೀರಿದ ಬೃಹತ್‌ನಕ್ಷತ್ರ,
ಇದರ ಗುರುತ್ವಾಕರ್ಷಣ ಶಕ್ತಿ, ಪವಾಡ ಸದೃಶ,
ಬೆಳಕೂ ಹೊರಬರದು ಇದರ ಹಿಡಿತದಿಂದ,
ಅಗೋಚರವಿದು ಬರಿಯ ಕಣ್ಣಿಗೆ, ದೂರದರ್ಶಕ ಯಂತ್ರಕ್ಕೂ
ಇದು ಅಗಾಧ ಶಕ್ತಿಯ ಆಗರ.
ಇದೊಂದು ಸೃಷ್ಟಿಯ ವಿಪರೀತ ವೈಚಿತ್ರ್ಯ.
ಇದರ ರೂಪಾಂತರ ಶ್ವೇತರಂಧ್ರ (White hole).
ಇದೊಂದು ಬೃಹತ್ ಆಕಾಶ ಕಾಯ,
ಇದರ ಸ್ಫೋಟದಿಂದ ಮತ್ತೆ ನಕ್ಷತ್ರ ಸಮೂಹ ಸೃಷ್ಟಿ.
ಈ ಕರಿ ಬಿಳಿ ನಕ್ಷತ್ರಗಳ ಲೀಲೆ ನಿನ್ನ ಲೀಲೆ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೯೫

ನಾವೀಗ ಒಂದು ನೂರು ಕೋಟಿ,
ನಾವು ಸ್ವತಂತ್ರರಾದಾಗ ಮುವತ್ತುಮೂರು ಕೋಟಿ,
ಅರ್ಧಕ್ಕಿಂತ ಹೆಚ್ಚು ಜನರಿಗೆ ಬಡತನದ ಬಾಳೇ ಗತಿ,
ಬೆಳೆಯುವ ಈ ಸಂಖ್ಯೆಗೊಂದು ಕಡಿವಾಣ ಬೇಕು,
ಸಂತಾನ ನಿರೋಧ ನೀತಿ ಎಲ್ಲರಿಗೂ ಅನ್ವಯವಾಗಬೇಕು,
ಅದು ರಾಷ್ಟ್ರನೀತಿಯಾಗಬೇಕು.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನಮ್ಮ ದೇಶ ಉಳಿಯುವಂತಾಗಬೇಕು.

೯೬

ವೈದ್ಯ ವಿಜ್ಞಾನ ಮಾನವನಿಗೊಂದು ವರದಾನ,
ಅಲೋಪತಿ, ಆಯುರ್ವೇದ, ಹೋಮಿಯೋಪತಿ
ಇವೆಲ್ಲವುಗಳಿಗೆ ತಮ್ಮದೇ ಆದ ರೀತಿ,
ಇವೆಲ್ಲವುಗಳಿಗೆ ತಮ್ಮದೇ ಆದ ಮಿತಿ,
ಇವೆಲ್ಲವುಗಳ ಸಮನ್ವಯವಾಗಬೇಕು
ರೂಪಗೊಳ್ಳಬೇಕು ಹೊಸ ಚಿಕಿತ್ಸಾನೀತಿ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ರೂಪಗೊಳ್ಳಬೇಕದರಿಂದ ಆರೋಗ್ಯ ರಕ್ಷಣೆಯ ರೀತಿ.

೯೭

ಹಿಂದುಳಿದವರು ಮುಂದೆ ಬರಲೇಬೇಕು,
ಬಸವ ಬುದ್ಧ ಗಾಂಧೀ ಶ್ರಮಿಸಿದರು ಇದಕ್ಕಾಗಿ,
ಅವರಿಗೆ ಉಣಗಲಿಸಿದರು, ಉಡಗಲಿಸಿದರು,
ಮಾತನಾಡಗಲಿಸಿದರು ಮಾಸವರಾಗಲು ಕಲಿಸಿದರು ಅಂದು,
ಇದೊಂದು ರಾಜಕೀಯ ತಂತ್ರ ಇಂದು,
ಶೋಷಣೆಯ ನೀತಿಯಾಗಿದೆ ಇದೊಂದು,
ಇದು ತೊಲಗಬೇಕು. ಅಂದಿನ ನೀತಿ ಜಾರಿಗೆ ಬರಬೇಕು.
ಎಲ್ಲರಲಿ ಬೆಳೆಯಬೇಕು ಪರಸ್ಪರ ಪ್ರೀತಿ,
ಹೀಗಾದರೆ ಬೇಕಿಲ್ಲ ಮೀಸಲಾತಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ಇದಾಗಲಿ ಇಂದಿನ ರಾಜಕೀಯ ನೀತಿ.

೯೮

ಭೂಗೋಳದ ಪೂರ್ವಕ್ಕೆ ಹೋಗಲಿ,
ಪಶ್ಚಿಮಕ್ಕೆ ಹೋಗಲಿ,
ಉತ್ತರಕ್ಕೆ ಹೋಗಲಿ, ದಕ್ಷಿಣಕ್ಕೆ ಹೋಗಲಿ,
ನೆಲವೊಂದೇ, ಜಲವೊಂದೇ,
ಬೀಸುವ ಗಾಳಿಯೊಂದೇ,
ಸೂರ್ಯ ಚಂದ್ರರೊಂದೇ
ಮಾನವ ಸ್ವಭಾವವೊಂದೇ,
ಮಾನವ ಕುಲವೊಂದೇ
ಸೃಷ್ಟಿ ಕಲಿಸುವ ಪಾಠ ಇದೊಂದೇ,
ನಾವು ಕಲಿಯಬೇಕಾದುದೊಂದೇ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೯೯

ಪರೀಕ್ಷೆಗಳು ಶಿಕ್ಷಣ ಕ್ಷೇತ್ರಕ್ಕೊಂದು ಪಿಡುಗು,
ಇದು ನಮ್ಮ ದೇಶಕೆ ಮೆಕಾಲೆ ತಂದ ಪಿಡುಗು,
ಹೆಚ್ಚುತಿದೆ ಇವುಗಳಿಂದ ಭ್ರಷ್ಟಾಚಾರ, ಹಿಂಸಾಚಾರ
ಇವುಗಳಿಂದಾಗದು ಯೋಗ್ಯತೆಯ ನಿಜ ಪರೀಕ್ಷೆ!
ಇವು ತೊಲಗಬೇಕು, ಅಮೆರಿಕಾದ ಮುಕ್ತ ಪದ್ಧತಿ
ಜಾರಿಗೆ ಬರಬೇಕು.

ಶಿಕ್ಷಣದ ಹೊಸ ನೀತಿ ಜಾರಿಗೆ ಬರಬೇಕು,
ರಾಷ್ಟ್ರೀಯ ಶಿಕ್ಷಣ ನೀತಿ, ಪರಿಸರಕ್ಕೆ ತಕ್ಕ ನೀತಿಯಾಗಬೇಕು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೦೦

ಒಮ್ಮೆ ಆಕಾಶ ಆನಂದಬಾಷ್ಪ ಸುರಿಸುತ್ತದೆ,
ಮಳೆ ಬರುತ್ತದೆ,
ಭೂಮಿ ಹಸಿರಾಗುತ್ತದೆ,
ಪೈರುಗಳು ನಲಿಯುತ್ತವೆ,
ಹಕ್ಕಿಗಳು ಹಾಡುತ್ತವೆ,
ಸಮೃದ್ಧಿ ಕಾಣಿಸುತ್ತದೆ; ಮತ್ತೊಮ್ಮೆ;
ಆಕಾಶಕ್ಕೆ ತೂತಾಗುತ್ತದೆ,
ಮಳೆ ಧಾರಾಕಾರವಾಗಿ ಸುರಿಯುತ್ತದೆ,
ಕೆರೆಹಳ್ಳ ಬಾವಿಗಳು ತುಂಬುತ್ತವೆ,
ನದಿ ಉಕ್ಕೇರುತ್ತದೆ, ಹುಚ್ಚೇರಿ ಹರಿಯುತ್ತದೆ,
ಮನೆ ಬೀಳುತ್ತವೆ, ಜನ ಸಾಯುತ್ತಾರೆ,
ಎಲ್ಲೆಲ್ಲಿಯೂ ಹಾಹಾಕಾರ!
ನಿನ್ನ ತಾಳವೇಕೆ ತಪ್ಪುತಿದೆಯೋ ನಾಕಾಣೆ,
ಇದು ಸೃಷ್ಟಿ ಲೀಲೆಯೋ ನಿನ್ನಲೀಲೆಯೊ?
ಇಂಥ ನಿನ್ನ ಲೀಲೆ ಸಾಕು,
ನೀನು ತಾಳಬದ್ಧವಾಗಿ ಕುಣಿಯಬೇಕು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೦೧

ಚಂಚಲ ಮಾನ್ಸೂನುಗಳು,
ನಮ್ಮ ಹಣೆಬರಹ ಬರೆಯುತ್ತವೆ,
ನಮ್ಮ ನದಿಗಳೆಲ್ಲ ಒಂದಾದರೆ
ಈ ಮಾನ್ಸೂನುಗಳ ಗೊಡವೆಯೇ ಬೇಡ,
ಗಂಗಾ ಕಾವೇರಿ ಸಂಪರ್ಕ,
ನಮ್ಮೆಲ್ಲ ನದಿಗಳ ಪರಸ್ಪರ ಸಂಪರ್ಕ,
ತಂದೀತಿದು ಬರಗಳಿಗೆ ಪರಿಹಾರ,
ಹುಚ್ಚು ಪ್ರವಾಹಗಳಿಗೂ ಪರಿಹಾರ.

ಬೇಕಿದಕೆ ಕೋಟಿ ಕೋಟಿ ರೂಪಾಯಿಗಳ ಐಶ್ವರ್ಯ.
ಭ್ರಷ್ಟರಾಜಕಾರಣಿಗಳ, ಮಂತ್ರಿಗಳ,
ಭ್ರಷ್ಟ ಅಧಿಕಾರಿಗಳ, ಕಾಳಸಂತೆಯ ವ್ಯಾಪಾರಿಗಳ
ಅಪ್ರಮಾಣಿಕ ಸಂಪಾದನೆ
ಇತ್ತ ಹರಿಯಲಿ, ಈ ಕಾರ್ಯ ಕೈಗೂಡಲಿ,
ನಮ್ಮ ದೇಶ ಉದ್ಧಾರವಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನಮ್ಮ ಜನ ಬದುಕುವಂತಾಗಲಿ.

೧೦೨

ಶೈವಧರ್ಮ ಬಹು ಪುರಾತನ ಧರ್ಮ,
ಭೂಗೋಳದ ಮೇಲೆ ಉದಯಿಸಿದ ಪ್ರಪ್ರಥಮಧರ್ಮ,
ಶಾಖೆಗಳನೇಕ ಈ ಮಹಾವೃಕ್ಷಕ್ಕೆ,
ವೀರಶೈವಕೆ ಅಗ್ರಪಟ್ಟ ಇವುಗಳಲ್ಲಿ
ವೀರಶೈವವೊಂದು ಪರಿಪೂರ್ಣಧರ್ಮ, ವಿಶ್ವಧರ್ಮ.
ಇದು ಉದಯವಾದ ಕಾಲದ ಚರ್ಚೆಬೇಡ,
ಇದರ ತತ್ವಗಳ ಚರ್ಚೆಬೇಕು, ಆಚರಣೆಬೇಕು,
ಇದರ ಸಂವಿಧಾನ ಒಂದೇ,
ಅಷ್ಟಾವರಣಗಳು ಒಂದೇ, ಪಂಚಾಚಾರಗಳು ಒಂದೇ
ಷಟ್‌ಸ್ಥಲವೊಂದೇ.
ಬಸವಾದಿ ಪ್ರಮಥರ ನಿತ್ಯನೂತನ ತತ್ವಗಳಿವು,
ಇವುಗಳ ಕಟ್ಟುನಿಟ್ಟಿನಾಚರಣೆ ಬೇಕು.
ಇದು ವಿಶ್ವಧರ್ಮವಾಗಬೇಕು.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ಇತರರಿಗೆ ದಾರಿದೀಪವಾಗಬೇಕು.

೧೦೩

ವೀರಶೈವ, ಲಿಂಗಾಯತ ಬೇರೆ ಬೇರೆಂಬ ವಾದ ಬೇಡ,
ವೀರಶೈವವೇ ಲಿಂಗಾಯತ, ಲಿಂಗಾಯತವೇ ವೀರಶೈವ;
ವೀರ ನಿಷ್ಠೆಯಿಂದ ಇಷ್ಟಲಿಂಗರೂಪಿ ಶಿವನನ್ನು
ಪೂಜಿಸುವುದೇ ವೀರಶೈವ.
ಲಿಂಗವನು ದೇಹದ ಮೇಲೆ ಆಯತ ಮಾಡಿಕೊಳ್ಳುವುದೇ ಲಿಂಗಾಯತ,
ತಿಳಿದವರಿಗೆ ಇವೆರಡೂ ಒಂದೇ.

ಈ ಮರ್ಮವನೆಲ್ಲರೂ ತಿಳಿಯಬೇಕು.
ಧರ್ಮ ಸಂಘಟನೆಯಾಗಬೇಕು.
ಸಮಾಜ ಸಂಘಟನೆಯಾಗಬೇಕು,
ಧರ್ಮ ಉಳಿಯಬೇಕು, ಬೆಳೆಯಬೇಕು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನೀನೆಲ್ಲರಿಗೂ ಸನ್ಮತಿ ನೀಡಬೇಕು.

೧೦೪

ಎಲೆಮನವೇ ನಿನಗೆ ಈ ಹುಚ್ಚು ಹವ್ಯಾಸಗಳೇಕೆ?
ಚಂಚಲತೆಯೊಂದಿಗೆ ಸರಸವಾಡಲೇಕೆ?
ಕೋತಿಯೆಂದು ಕರೆಸಿಕೊಳ್ಳಲೇಕೆ?
ಆಗಲಿ ನಿನ್ನ ಚಿಂತನೆ ಊರ್ಧ್ವಮುಖ,
ನಿನ್ನಲಿರುವ ಮಹಾಲಿಂಗ ಜಾಗೃತವಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ ಪ್ರಕಟವಾಗಲಿ.

೧೦೫

ಈ ಜಗತ್ತು ಪರಿವರ್ತನಶೀಲ,
ಇಲ್ಲಿ ಇಂದಿದ್ದುದು ನಾಳೆ ಇಲ್ಲ,
ಇಲ್ಲಿ ಯಾವುದೂ ಶಾಶ್ವತವಲ್ಲ,
ಆದರೂ ಇದು ಮಾಯೆಯಲ್ಲ.
ಸಂಸಾರ ನಶ್ವರವಾದರೂ ತ್ಯಾಜ್ಯನೀಯವಲ್ಲ,
ಇದಾಗಲಿ ಅರ್ಥಪೂರ್ಣ,
ಇದಾಗಲಿ ಪರಿಪೂರ್ಣ.
ಈ ನೌಕೆ ಸಾಗಲಿ ಅನಂತದೆಡೆಗೆ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನೆಡೆಗೆ.

೧೦೬

ನಿನ್ನ ನಿಂದಕರ ನೀ ದೂಷಿಸದಿರು,
ನಿನ್ನನವರು ಎಚ್ಚರಿಸುವವರು,
ಎಚ್ಚರಿಸಿ ಮಾರ್ಗದರ್ಶನ ಮಾಡುವವರು.
ನಿನ್ನಾತ್ಮಕಂಟದ ಕೊಳೆಯ ತೊಳೆಯುವರು,
ನಿನ್ನ ಏರಿಕೆಗೆ ಕಾರಣವಾಗುವವರು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನತ್ತ ನಿನ್ನ ಕರೆದೊಯ್ಯುವವರು.

೧೦೭

ಹಿಡಿದುದ ಬಿಡದಿರೆ, ಬಿಟ್ಟುದ ಹಿಡಿಯದಿರೆ,
ಸಜ್ಜನಿಕೆಯ ಬಿಡದಿರೆ, ದೌರ್ಜನ್ಯವ ಹಿಡಿಯದಿರೆ,
ಸತತ ದುಡಿಯುದ ಬಿಡದಿರೆ,
ಸೋಮಾರಿಯಾಗದಿರೆ,
ಕೊಟ್ಟಮಾತ ತಪ್ಪದಿರೆ,
ಅನೃತವ ನುಡಿಯದಿರೆ,
ಏನ ಕೊಡನಯ್ಯ ನಮ್ಮ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೦೮

ಕಾಯಕದಲಿ ನಿರತನಾದರೆ ಆರೋಗ್ಯವೃದ್ಧಿ,
ಕಾಯಕದಲಿ ನಿರತನಾದರೆ ಆಯುಷ್ಯವೃದ್ಧಿ,
ಸೋಮಾರಿಗಳಿಗೆ ಅನಾರೋಗ್ಯದ ಬಾಧೆ
ಸೋಮಾರಿಗಳಿಗೆ ಅರೆಯಾಯುಷ್ಯ
ಸೋಮಾರಿಗಳ ಮುಖ ನೋಡಲಾಗದು;
ಅವರ ಸಹವಾಸ ಮಾಡಲಾಗದು,
ಕಾಯಕ ನಿರತನಾಗು, ಸೋಮಾರಿತನವ ನೀಗು,
ಎಲ್ಲರಿಗೂ ಬೇಕಾಗು,
ಅಂತರಂಗ ಬಹಿರಂಗ ರೋಗಗಳ ನೀಗು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ
ಕೃಪೆಗೆ ಪಾತ್ರನಾಗು.

೧೦೯

'ಹಿಂದೂ' ಎಂಬುದೊಂದು ಜೀವನ ವಿಧಾನವಯ್ಯ,
ಅದು ಭಾರತೀಯ ಜೀವನ ವಿಧಾನವಯ್ಯ,
ವೀರಶೈವ ಈ ವಿಧಾನಕ್ಕೆ ಸೇರುವದಯ್ಯ,
ಹಿಂದೂ ಎಂಬುದೊಂದು ಧರ್ಮವಲ್ಲವಯ್ಯ;
ವೈದಿಕ ಧರ್ಮಕದು ಸಂವಾದಿ ಪದವಲ್ಲವಯ್ಯ.
ಈ ಅರ್ಥದಲಿ ವೀರಶೈವರು ಹಿಂದೂಗಳಲ್ಲವಯ್ಯಾ
ವೀರಶೈವಧರ್ಮ ಸ್ವತಂತ್ರ ಧರ್ಮವಯ್ಯಾ,
ಈ ವಾದ ಇಲ್ಲಿಗೆ ನಿಲ್ಲಬೇಕಯ್ಯ
ಸತ್ಯಕ್ಕೆ ಜಯಸಿಗಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೦

ಉಪಕಾರ ಮಾಡಿದವರಿಗೆ ಅಪಕಾರ ಮಾಡುವವರು ರಾಕ್ಷಸರು.
ಉಪಕಾರ ಮಾಡಿದವರಿಗೆ ಉಪಕಾರ ಮಾಡುವವರು ಮಾನವರು.
ಅಪಕಾರ ಮಾಡಿದವರಿಗೆ ಉಪಕಾರ ಮಾಡುವವರು ಶರಣರು.
ಹೇಮರೆಡ್ಡಿ ಮಲ್ಲಮ್ಮ ಇಂಥ ಶರಣೆ.
ನಿರಕ್ಷಕುಕ್ಷಿ ಹೃದಯ ಪರಿಶುದ್ಧೆ ಈಕೆ.
ಪಾಪವನರಿಯದ ಮುಗ್ಧೆ ಈಕೆ.
ಅತ್ತೆ ಅತ್ತಿಗೆ ನಾದಿನಿಯರು
ಅಟ್ಟಿದರೀಕೆಯನ್ನು ಕಾಡಿಗೆ,
ಬಳಲಿದವರು ನಾನಾ ರೋಗಗಳಿಂದ,
ತಾನೊಲಿದ ಮಲ್ಲಿಕಾರ್ಜುನನ ಬೇಡಿದಳು,
ತಂದುಕೊಟ್ಟಳವರಿಗೆ ಆರೋಗ್ಯಭಾಗ್ಯ, ಸರ್ವಸಂಪದವ.
ಅಪಕಾರ ಮಾಡಿದವರಿಗುಪಕಾರ
ಮಾಡುವ ಪಾಠ ಸಾರಿದಳು.
ಈ ಮಹಾ ಶಿವಶರಣೆಯರು ಪಾದಕೆ
ನಮೋ ನಮೋ ಎಂಬೆನಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೧

ಸಂಸಾರದಲ್ಲಿದ್ದು ಸಾಧಿಸಿದರಾಧ್ಯಾತ್ಮವ ಶರಣರು,
ಆಯಿತು ಸಂಸಾರವೇ ಯೋಗವವರಿಗೆ,
ಶರಣ ಪಥದಲಿ ನಡೆದು ಸಂಸಾರಿಯಾಗಿ ಯೋಗಿನಿ
ಎನಿಸಿದಳು ಹೇಮರೆಡ್ಡಿ ಮಲ್ಲಮ್ಮ.
ಸಂಸಾರವಿಂದು ಜಂಜಡಮಯ,
ಅದು ಆಗಬೇಕಿಂದು ಶಿವಮಯ,
ಅನುಸರಿಸಬೇಕು ನಾವು ಮಲ್ಲಮ್ಮನ ಮೇಲ್ಪಂಗ್ತಿಯ,
ಆಗ ಆದೀತು ಎಲ್ಲರ ಬಾಳು ಸುಖಮಯ.
ನಿನ್ನ ಕರುಣೆಯಿಂದ ಇದು ಸಾಧ್ಯವಾಗಲಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೨

ಅರ್ಧನಾರೀಶ್ವರ ಪರಿಕಲ್ಪನೆಯೊಂದು ಉದಾತ್ತ ಪರಿಕಲ್ಪನೆ,
ಶಿವಶಕ್ತಿ ಸಂಪುಟವೊಂದು ಪರಿಪಕ್ವ ಪರಿಕಲ್ಪನೆ.

ಇದು ಹೆಣ್ಣು ಗಂಡಿನ ಸಮಾನತೆಯ ಪರಿಕಲ್ಪನೆ.
ಸ್ತ್ರೀ ಪುರುಷ ಸಮಾನತೆ ಶರಣ ಧರ್ಮದ ಸೂತ್ರ
ಇದರಿಂದಾಗುವುದು ಕುಟುಂಬದ ಉದ್ಧಾರ, ಸಮಾಜದುದ್ಧಾರ,
ಮಾನವಕುಲದುದ್ಧಾರ.
ಅನುಸರಿಸಲೀ ನೀತಿಯ ನಮ್ಮ ರಾಷ್ಟ್ರ,
ನಿರ್ಮಾಣವಾಗಲಿ ಸುಭದ್ರ ರಾಷ್ಟ್ರ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೩

ಅಕ್ಷರಸ್ಥರಿಲ್ಲದ ಪ್ರಜಾಪ್ರಭುತ್ವ ಅರ್ಥಹೀನ.
ಶಿಕ್ಷಣಕೆ ಸಾಕ್ಷರತೆ ಮೊದಲ ಹೆಜ್ಜೆ.
ಶಿಕ್ಷಣ ಸಂಸ್ಕಾರದ ಮೊದಲ ಹೆಜ್ಜೆ.
ಸಾಕ್ಷರತೆ ಇಲ್ಲದೆ ಶಿಕ್ಷಣವಿಲ್ಲ.
ಶಿಕ್ಷಣವಿಲ್ಲದೆ ಸಂಸ್ಕಾರವಿಲ್ಲ.
ನಿರಕ್ಷರಕುಕ್ಷಿಗಳ ಸಂಖ್ಯೆ ಅಧಿಕ ನಮ್ಮಲ್ಲಿ,
ಅವರಾಗಬೇಕು ಸಾಕ್ಷರರು,
ಅವರಾಗಬೇಕು ಸುಶಿಕ್ಷಿತರು,
ಅವರಾಗಬೇಕು ಸುಸಂಸ್ಕೃತರು,
ಆಗಾಗುವುದು ಪ್ರಜಾಪ್ರಭುತ್ವ ಅರ್ಥಪೂರ್ಣ.
ಆಗಾಗುವುದು ನಮ್ಮ ದೇಶದ ಉದ್ಧಾರ,
ಆಗ ನಾವಾಗುವೆವು ಜಗಕೆಲ್ಲ ಆಧಾರ.
ಸಾಕ್ಷರತೆ ಬೆಳೆಯಲಿ, ನಮ್ಮ ಸಂಸ್ಕೃತಿ ಉಳಿಯಲಿ,
ಜಗಕೆಲ್ಲ ಮಾದರಿಯಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೪

ದಲಿತರ ಉದ್ಧಾರ ನೀತಿ ಅವರ ಉದ್ಧಾರಕ್ಕಲ್ಲ,
ಅದಿಂದು ರಾಜಕಾರಣಿಗಳ ಉದ್ಧಾರಕ್ಕಾಗಿ.
ಓಟುಗಳನ್ನು ಗಳಿಸುವುದಕ್ಕಾಗಿ,
ಅಧಿಕಾರಕ್ಕೆ ಬಂದು ಮೆರೆಯುವುದಕ್ಕಾಗಿ,
ಸಮಾಜವನೊಡೆದು ಆಳುವ ನೀತಿ ನಿಲ್ಲಲಿ,
ದಲಿತರ ನಿಜವಾದ ಉದ್ಧಾರ ಆಗಲಿ.

ಇದು ರಾಜಕೀಯದಿಂದ ಹೊರಗಿರಲಿ,
ಬಹಿಷ್ಕರಿಸಲಿ ದಲಿತರಿಂಥ ನೀತಿಯನ್ನು.
ಚುನಾವಣೆಗಳಾಗುವವು ಆಗ ಆಯ್ಕೆಯ
ನಿಜವಾದ ರೀತಿಗಳು.
ಆರಿಸಿಬರುವರಾಗ ಯೋಗ್ಯರು,
ರಚನೆಯಾಗುವುದಾಗ ಸುಭದ್ರ ಸರ್ಕಾರ,
ಸುಗಮವಾಗುವುದಾಗ ದೇಶದುದ್ಧಾರಮಾರ್ಗ,
ಆಗುವುದು ನಮ್ಮ ದೇಶವಾಗ ಸ್ವರ್ಗ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೫

ಜಂಗಮವೆಂದರೆ ಚಲಿಸುವ ಲಿಂಗ,
ನಡೆದಾಡುವ ದೇವರು,
ಆಧ್ಯಾತ್ಮಸಿದ್ಧಿಯ ಪರಮನಿರಂಜನಮೂರ್ತಿ.
ಈತನ ಸೇವೆಯೇ ಲಿಂಗಸೇವೆ.
ಈತನ ತೃಪ್ತಿಯೇ ಲಿಂಗತೃಪ್ತಿ.
ಈತನಿಗೆ ಗೈದ ದಾಸೋಹವೇ ಲಿಂಗದಾಸೋಹ.
ಸಿಕ್ಕುವರೆ ಇಂಥ ಜಂಗಮರಿಂದು?
ಸಿಕ್ಕರೆ ಅಂಥವರಿಗೆ ದಾಸೋಹಗೈಯ್ಯಬೇಕಯ್ಯ,
ಪುನೀತರಾಗಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೬

ಚಲಿಸುವದೆಲ್ಲ ಜಂಗಮವೇ,
ಸಕಲ ಜೀವಾತ್ಮರೂ ಜಂಗಮರೇ.
ಸಮಾಜವೂ ಜಂಗಮವೇ,
ರಾಷ್ಟ್ರವೂ ಜಂಗಮವೇ,
ಇವುಗಳ ಸೇವೆಯೇ ಜಂಗಮಸೇವೆ.
"ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು"
ಎರೆ ಇಂಥ ಜಂಗಮಕ್ಕೆ,
ನೆನೆಯಲಿ ನಮ್ಮ ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೭

ಮಕ್ಕಳ ಮೇಲಿನ ಮಮತೆ
ಮಿತ್ರರ ಸಖ್ಯಭಾವ
ಪ್ರೇಮಿಗಳ ಪ್ರಣಯಾನುರಾಗ,
ಪರಮಾತ್ಮನಲ್ಲಿಟ್ಟ ಭಕ್ತಿ,
ಪರಮಾತ್ಮನ ಭಕ್ತವಾತ್ಸಲ್ಯತೆ,
ಪ್ರೀತಿಯ ಅನಂತಮುಖಗಳಯ್ಯ.
ಪ್ರೀತಿಯೇ ಸುಖಸಂಸಾರದ ಜೀವಾಳ.
ಪ್ರೀತಿಯೇ ಸಮಾಜೋನ್ನತಿಯ ಜೀವಾಳ.
ಪ್ರೀತಿಯೇ ರಾಷ್ಟ್ರೈಕ್ಯತೆಯ ಜೀವಾಳ,
ಪ್ರೀತಿಯೇ ಬಾಳ ಸಾಗರವ ದಾಟಿಸುವಂಬಿಗ,
ಇದನಂಬಿ ಸಫಲ ಜೀವಿಯಾಗಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೧೮

ನಾವು ಬಯಸುವುದೊಂದು,
ನಡೆಯುವದು ಬೇರೊಂದು.
ನಾವು ಬಯಸಿದಂತೆಲ್ಲವೂ
ನಡೆಯಬೇಕೆಂಬ ಹಠ ಬೇಡ,
ಮಾಡುವ ಪ್ರಯತ್ನ ಮಾಡಬೇಕಯ್ಯ,
ನೀಡುವವನೊಬ್ಬನಿದ್ದಾನೆ,
ನೀಡಿದುದನು ಸ್ವೀಕರಿಸಬೇಕಯ್ಯ.
ಸುಖಬರಲಿ ದುಃಖಬರಲಿ ಸ್ವೀಕರಿಸಬೇಕಯ್ಯ.
ಇದೇ ಪ್ರಸಾದ ಜೀವನವಯ್ಯ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ
ಅರಿಯುವ ರೀತಿಯಯ್ಯ.

೧೧೯

ಆಶೆ ಆಕಾಂಕ್ಷೆಗಳಿಗೆ ಮಿತಿ ಇಲ್ಲ,
ಅತಿಯಾಶೆ ತರವಲ್ಲ.
"ಅತಿಯಾಶೆ ಗತಿಗೆಡಿಸಿತೆಂದುದು ಗಾದೆ",
ಆಶೆಯೇ ದಾಸತ್ವವೆಂದರು ಶರಣರು,

ಅತಿಯಾಶೆಬೇಡ, ದುಃಖ ದುಮ್ಮಾನಗಳಿಗೆಡಗೊಡಬೇಡ,
ಇತಿಮಿತಿ ಮಾರ್ಗವೇ ಸುಖಕ್ಕೆ ಸೋಪಾನ,
ಇದರಿಂದ ಶಾಂತಿಸಮಾಧಾನ
ಸಾಧಿಸುವದಿದರಿಂದ ದೈವತ್ವದ ಸನ್ನಿಧಾನ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೦

ಆಶೆ ಇಲ್ಲದವನೇ ಶ್ರೀಮಂತ,
ಎಷ್ಟಿದ್ದರೂ ಇನ್ನು ಬೇಕೆನ್ನುವವನೇ ಬಡವ.
ಇಂಥ ಬಡವರಿಂದ ತುಂಬಿದೆ ನಮ್ಮ ದೇಶ.
ಆಶೆ ತೊಲಗಲಿ, ಆಗಲಿಂಥ ಬಡವರು ಶ್ರೀಮಂತರು.
ಆಗಲಿದರಿಂದ ಸಮಸ್ಯೆಗಳ ಪರಿಹಾರ,
ಆಗಲಿದು ನಮ್ಮ ಬಾಳಿನ ಸೂತ್ರ
ಬಾಳಾಗುವುದಾಗ ಸುಸೂತ್ರ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೧

ಒಂದು ಕಾಲಕ್ಕಿತ್ತು ಇಂಜಿನಿಯರರಾಗುವ ಹುಚ್ಚು.
ನಂತರ ಬಂತು ಡಾಕ್ಟರರಾಗುವ ಹುಚ್ಚು.
ಈಗ ಎಲ್ಲರಿಗೂ ಕಂಪ್ಯೂಟರುಗಳ ಹುಚ್ಚು.
'ಜನ ಮರುಳೋ ಜಾತ್ರೆ ಮರುಳೊ' ಇದೊಂದು ಹುಚ್ಚು.
ಈ ಹುಚ್ಚು ತೊಲಗಲಿ.
ಆಸಕ್ತಿಯಿದ್ದ ಉದ್ಯೋಗವ ಆರಿಸಲಿ,
ಗಳಿಸಲಿ ಅದರಲಿ ಪ್ರಾವೀಣ್ಯತೆ.
ಇದರಿಂದಾಗುವುದು ವ್ಯಕ್ತಿ ಉದ್ಧಾರ,
ಕುಟುಂಬದುದ್ಧಾರ, ದೇಶದುದ್ಧಾರ,
ಇದು ನಿರುದ್ಯೋಗ ಸಮಸ್ಯೆಗೂ ಪರಿಹಾರ.
ಕಂಡುಕೊಳ್ಳಬೇಕಾಗಿದೆ ನಮ್ಮೆಲ್ಲ ಸಮಸ್ಯೆಗಳಿಗೆ ಪರಿಹಾರ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೨

ಬೇಸಿಗೆಯಲಿ ಬಿಸಿಲಿನ ತಾಪ,
ಚಳಿಗಾಲದಲಿ ಚಳಿಯ ಕೊರೆತ,

ಮಳೆಗಾಲದಲಿ ಮಳೆಯ ಕಾಟ,
ಅತಿಯಾದರಾದವದೂ ಹಿತವಲ್ಲ,
ಅತಿಯಾದರಾಗುವದು ಅನಾಹುತ.
ನಾವು ಕಲಿಯಬೇಕು ನಿಸರ್ಗದಿಂದೀಪಾಠ.
ಹಿತಮಿತ ಬಾಳುವೆ ಬಾಳಬೇಕು,
ಸಾರ್ಥಕತೆಯ ದಾರಿಯಲಿ ನಡೆಯಬೇಕು,
ಜೀವನದ ಚರಮಗುರಿ ಸಾಧಿಸಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೩

ವಿದ್ಯುನ್ಮಾಧ್ಯಮಗಳಿಂದ ಕೊಡುತ್ತಿರುವ ಶಿಕ್ಷಣ
ಕೊಲೆ, ಸುಲಿಗೆ, ದರೋಡೆ, ಹಾದರದ ಶಿಕ್ಷಣವಯ್ಯ.
ಚಲನಚಿತ್ರಗಳು ಬಾಳಶಿಕ್ಷಣದ ಮಾಧ್ಯಮವಾಗಬೇಕಯ್ಯ,
ಸಂಸ್ಕೃತಿ ಪ್ರಸಾರದ ಮಾಧ್ಯಮಗಳಾಗಬೇಕಯ್ಯ.
ಪುರಾಣ ಪುಣ್ಯಕಥೆಗಳ ಸಂಸ್ಕೃತಿ ಹೋಯಿತು,
ಪುಸ್ತಕ ಸಂಸ್ಕೃತಿ ಹೋಯಿತು.
ಇಂದಿನದು ಚಲನಚಿತ್ರ ಸಂಸ್ಕೃತಿ,
ದೂರದರ್ಶನದ ಸಂಸ್ಕೃತಿ,
ಇವು ನಮ್ಮ ಭವ್ಯ ಪರಂಪರೆಯ
ಪ್ರಸಾದ ಮಾಧ್ಯಮಗಳಾಗಲಿ,
ದೇಶಭಕ್ತಿಯ ಬಿತ್ತುವ ಮಾಧ್ಯಮಗಳಾಗಲಿ,
ಬಾಳ ಹಸನಗೊಳಿಸುವ ಮಾಧ್ಯಮಗಳಾಗಲಿ,
ಜೀವನಾದರ್ಶಗಳನ್ನು ಬಿತ್ತರಿಸುವ ಮಾಧ್ಯಮಗಳಾಗಲಿ,
ನಮ್ಮತನವನು ಉಳಿಸುವ ಬೆಳೆಸುವ ಮಾಧ್ಯಮಗಳಾಗಲಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೪

ದೂರದರ್ಶನ ಕಂಪ್ಯೂಟರ್‌ಗಳು
ನಮ್ಮ ಜೀವನದ ಅವಿಭಾಜ್ಯ ಅಂಗವಿಂದು.
ಇವುಗಳಿಂದಾಗದಿರಲಿ ಮಾನವೀಯ ಮೌಲ್ಯಗಳ ಭಂಗ.
ಇವಾಗಲಿ ಜ್ಞಾನ ವಾಹಕ, ವಿಜ್ಞಾನ ವಾಹಕ,
ಇವಾಗಲಿ ಸಾಹಿತ್ಯ, ಸಂಗೀತ ಕಲೆವಾಹಕ,

ಇವಾಗದಿರಲಿ ಅಸಭ್ಯ ಸಂಸ್ಕೃತಿ ಪ್ರಸಾರಕ,
ಇವಾಗಲಿ ಆಧ್ಯಾತ್ಮ ವಿಜ್ಞಾನ ಸಮನ್ವಯ ಸಾಧಕ.
ಇವಾಗಲಿ ನಮ್ಮ ಜೀವನಸವನೆತ್ತರಿಸಲು ಪೂರಕ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೫

ಪರಹಿತಕ್ಕೆ ತ್ಯಾಗ ಮಾಡುವ ಆದರ್ಶಗಳೆಲ್ಲಿ?
ಅದು ಅಂದಿನ ಜೀವನ ರೀತಿ.
ಸ್ವಾರ್ಥಕ್ಕಾಗಿ ಏನನ್ನೂ ಮಾಡಲು ಹೇಸದ ನೀತಿಯೆಲ್ಲಿ?
ಇದು ಇಂದಿನ ಜೀವನ ರೀತಿ.
ಇದು ಸಂತರ ನಾಡು ಶರಣರ ಬೀಡು.
ಅವರ ವಾರಸುದಾರರು ನಾವಾದರೆ
ಮೆರೆಯೋಣ ಮತ್ತೆ ಅವರ ಆದರ್ಶಗಳ
ಆಗಲಿ ನೀತಿ ಮತ್ತೆ ನಮ್ಮ ಬಾಳ ರೀತಿ.
ಆಗಲಿ ಮತ್ತೆ ಕಲಿಯುಗವು ಕೃತಯುಗ.
ನಮ್ಮ ಸಾಹಿತ್ಯವಾಗಲದಕ್ಕೆ ದಾರಿದೀಪ,
ಉದಯವಾಗಲಿ ಹೊಸ ಮನ್ವಂತರ ಮತ್ತೆ.
ಎಲ್ಲರ ಬಾಳು ಬೆಳಗಲಿ ಮಾನವತೆ ಉಳಿಯಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೬

ಬ್ರಹ್ಮ ವಿಷ್ಣು ಮಹೇಶ್ವರ ವ್ಯಕ್ತಿಗಳಲ್ಲವಯ್ಯ,
ಇವು ತತ್ವಗಳ ಸಂಕೇತವಯ್ಯ.
ಸೃಷ್ಟಿಸುವ ಶಕ್ತಿ ಬ್ರಹ್ಮ, ರಕ್ಷಿಸುವ ಶಕ್ತಿ ವಿಷ್ಣು,
ಲಯಮಾಡುವ ಶಕ್ತಿ ಮಹೇಶ್ವರನಯ್ಯ.
ಇವು ಪರಶಿವನಲ್ಲಿ ಅಡಕವಯ್ಯ.
ಹುಟ್ಟಿಸುವವ, ರಕ್ಷಿಸುವವ, ಲಯ ಮಾಡುವವ
ಅವನೇ ಅಯ್ಯ, ಅವನೇ ಏಕಮಾತ್ರ ದೈವವಯ್ಯ.
ಅವನ ನಂಬಿ ಭವಸಾಗರ ದಾಟಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೭

ಹುಟ್ಟಿದವರೆಲ್ಲ ಸಾಯಲೇಬೇಕು.
ಸಾವಿನ ಮರ್ಮವ ತಿಳಿದವರಿಲ್ಲ.

ಅದು ಯಾವಾಗ ಬರುವದು?
ಹೇಗೆ ಬರುವದು? ಇದು ಯಾರಿಗೂ ಗೊತ್ತಿಲ್ಲ.
ಬಂದಾಗ ಅದನ್ನು ಸ್ವಾಗತಿಸಲೇಬೇಕು.
ಶರಣರಿಗೆ ಸಾವಿಲ್ಲ, ಅದು ಅವರಿಗೆ ಮಹಾನವಮಿ.
ತತ್ವಕ್ಕಾಗಿ ಸಾಯುವವರಿಗೆಲ್ಲ ಅಮರಪದವಿ,
ಇಂಥ ಪದವಿ ಗಳಿಸಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೮

ಕಾಲವೊಂದಿತ್ತು :
ಹಿಂದು, ಮುಸ್ಲಿಂ, ಸಿಖ್, ಪಾರ್ಸಿ
ಇವರೆಲ್ಲ ಸಹೋದರರಂತಿದ್ದರು.
ಆಯಿತು ನಮ್ಮ ದೇಶದ ವಿಭಜನೆ,
ಯಾರಿಗೂ ಬೇಕಾಗಿರಲಿಲ್ಲ ಈ ವಿಭಜನೆ,
ಇದು ಬ್ರಿಟಿಷರ ಒಡೆದು ಆಳುವ ನೀತಿಯ ಜಾಲ.
ಅಂದು ಅವರು ಬಿತ್ತಿದ ವಿಷ ಬೀಜ ಇಂದು ಹೆಮ್ಮರವಾಗಿದೆ,
ರಕ್ತದೋಕಳಿಯಾಡುತ್ತಿದೆ,
ಜಾತಿಯ ಪೆಡಂಭೂತ.
ಇದನ್ನು ಹುಟ್ಟುಹಾಕಿದವರೇ ಇದನ್ನು ಕೊನೆಗಾಣಿಸಲಿ,
ಈಗ ಅವರಿಗೂ ಇದು ಅಸಾಧ್ಯವೇನೊ.
"ಸಬಕೊ ಸನ್ಮತಿ ದೇ ಭಗವಾನ್"
ಎಂಬ ಗಾಂಧೀಜಿ ಮಾತು ನೆನಪಿರಲಿ,
ಜಾತಿವಾದಿಗಳಿಗೆ ಜ್ಞಾನೋದಯವಾಗಲಿ.
ನಾವೆಲ್ಲ ಬಂಧುಗಳೆಂಬುದ ಮರೆಯದಿರಲಿ.
ನೆಲಸಲಿ ಶಾಂತಿ ಈ ಉಪಖಂಡದಲ್ಲಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೯

ಊರಿಂದೂರಿಗೆ ಸಂಪರ್ಕವಿಲ್ಲದ ಕಾಲವೊಂದಿತ್ತು
ದೇಶವಿದೇಶಗಳ ಸಂಪರ್ಕ ಸುಲಭವಿಂದು.
ಅಂತರ್ ಗ್ರಹ ಸಂಪರ್ಕ ಸಾಧ್ಯವಾಗಿದೆ ಈಗ.
ಈಗ ಜಗವೊಂದು ಗ್ರಾಮವಾಗಿದೆ.

ಆಗಲಿದೆ ಗ್ರಹ ನಕ್ಷತ್ರಗಳ ಸಮೂಹವೊಂದು ಗ್ರಾಮ,
ಏನಾದರೇನು? ಮನಸ್ಸು ಮನಸ್ಸುಗಳ ಹತ್ತಿರವಾಗದನ್ನಕ್ಕ,
ಮನಸ್ಸು ಮನಸ್ಸು ಬೆಸೆಯದನ್ನಕ್ಕ,
ವಿಶ್ವಭಾಂದವ್ಯ ಮೂಡಿ ಬರದನ್ನಕ್ಕ,
ಹೀಗಾದರೆ ವಿಜ್ಞಾನದ ಪ್ರಗತಿ ಅರ್ಥಪೂರ್ಣ,
ಇಲ್ಲದಿರೆ ಮಾನವ ಸಂಸ್ಕೃತಿ ಅಪೂರ್ಣ,
ಪರಿಪೂರ್ಣತೆಯತ್ತ ನಡೆಯಲಿ ಮಾನವತೆ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೩೦

ಮೌಲ್ಯಾಧಾರಿತ ರಾಜಕೀಯ ಅಮೆರಿಕಾದಲ್ಲಿ.
ಜಾತಿಯಾಧಾರಿತ ರಾಜಕೀಯ ನಮ್ಮಲ್ಲಿ.
ವ್ಯಕ್ತಿಯ ಯೋಗ್ಯತೆ ಸಾಧನೆಗಲ್ಲಿ ಮತ,
ಜಾತಿಯಾಧಾರದ ಮೇಲೆ ಇಲ್ಲಿ ಮತ.
ಅಲ್ಲಿಯದು ನಿಜವಾದ ಪ್ರಜಾಪ್ರಭುತ್ವ.
ಇಲ್ಲಿಯದು ಪ್ರಜಾಪ್ರಭುತ್ವದ ಆಭಾಸ
ಈ ಆಭಾಸವ ನಿವಾರಿಸು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೩೧

ಅನಂತಕೋಟಿ ಬ್ರಹ್ಮಾಂಡಗಳಿವೆಯೆಂತೆ,
ಇದು ನಮ್ಮ ಪುರಾಣ ಹೇಳುವ ಮಾತು.
ಇರುವುದೊಂದೇ ವಿಶ್ವ, ಇದು ಖಗೋಳ ವಿಜ್ಞಾನದ ಮಾತು.
ಸೂರ್ಯ ಕುಟುಂಬಗಳು, ನಿಹಾರಿಕೆಗಳು,
ಜ್ಯೋತಿರ್ಮೇಘಗಳು ಕಾಳರಂಧ್ರಗಳು,
ಬಿಳಿಯ ರಂದ್ರಗಳು ಇದರಂಗಗಳಂತೆ.
ಪ್ರತಿವಿಶ್ವವೊಂದಿದೆಯಂತೆ.
ಅದು ನಮ್ಮ ವಿಶ್ವದ ಪ್ರತಿಬಿಂಬದಂತೆ.
ಇವೆರಡರ ಸಂಪರ್ಕವಾದಡೆ,
ಮಹಾಸ್ಫೋಟವಂತೆ! ಆಗ
ಸರ್ವಸ್ವವೂ ನಾಶವಂತೆ.
ಇದು ಊಹೆಯೋ, ಸತ್ಯವೋ
ಈ ರಹಸ್ಯವ ನೀನೆ ಬಲ್ಲೆ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೩೨

ಆಕಾಶಕಾಯಗಳ ವ್ಯವಸ್ಥಿತ ಜ್ಞಾನ ಖಗೋಳವಿಜ್ಞಾನ.
ಆಕಾಶಕಾಯ ಮಾನವನ ಸಂಬಂಧ ವಿವರಿಸುವ ಶಾಸ್ತ್ರ
ಜ್ಯೋತಿಶಾಸ್ತ್ರ, ಆಕಾಶಕಾಯಗಳ ಪ್ರಭಾವ ಮಾನವನ ಮೇಲೆ?
ಸತ್ಯಾಂಶಕ್ಕಿಂತ ಮೂಢನಂಬಿಕೆಯೇ ಇವಕಾಧಾರ.
ಸೃಷ್ಟಿಗೆ ಮೂಲಪರತತ್ವ.
ಇದರಿಂದುದ್ಭವ ಆಕಾಶಕಾಯಗಳು,
ಇವು ಪರತತ್ವದ ಅಂಗ, ಅದು ಲಿಂಗ.
ಅಂಗವ ಪೂಜಿಸಿದೆ ಲಿಂಗವ ಪೂಜಿಸಿ
ಫಲವ ಪಡೆಯೆಂದರು ಶರಣರು.
ಪೂಜಿಸು ಮೂಲವ, ಆಗ ನೀನಾಗುವೆ ದೇವಮಾನವ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೩೩

ಅಮೆರಿಕಾದಲ್ಲಿ ಮಧ್ಯರಾತ್ರಿಯಾದರೆ,
ಭಾರತದಲ್ಲಿ ಮಧ್ಯಾಹ್ನ,
ಆಸ್ಟ್ರೇಲಿಯದಲ್ಲಿ ಸೂರ್ಯ ಮುಳುಗುವ ಸಮಯ.
ಭೂಮಿ ಒಂದೇ, ಸೂರ್ಯ ಒಂದೇ, ಆಕಾಶವೊಂದೇ.
ತಿಳಿದವರಿಗೆ ಇದೊಂದು ವಾಸ್ತವಿಕತೆ.
ತಿಳಿಯದವರಿಗೊಂದು ಪವಾಡ.
ಪವಾಡಗಳ ರೀತಿಯೇ ಹೀಗೆ.
ತಿಳುವಳಿಕೆ ಮೂಡಲಿ, ಪವಾಡಗಳ ರಹಸ್ಯ ಸ್ಫೋಟವಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೩೪

ಆತ್ಮವೊಂದಿದೆಯೆ? ಇದ್ದರೆ
ಸತ್ತ ಮೇಲೆ ಅದೇನಾಗುವದು?
ಇದೊಂದು ಒಡೆಯಲಾಗದ ಒಗಟು.
ಕರ್ಮಫಲದಂತೆ ಇದರ ಹುಟ್ಟು,
ಬೇರೆ ಬೇರೆ ದೇಹಗಳು ವಾಸವಿದಕೆ,
ಮಾಡಿದ ಪಾಪ ಪರಿಹಾರವಾದಾಗ
ಇದಕೆ ಮುಕ್ತಿಯಂತೆ, ಕೆಲವರ ಹೇಳಿಕೆ ಹೀಗೆ.

ಮತ್ತೆ ಕೆಲವರ ಮಾತೇ ಬೇರೆ;
ಪ್ರಳಯಕಾಲದವರೆಗೆ ಇದು ಕಾಯಬೇಕಂತೆ, ಆಗ
ಪರಮಾತ್ಮನ ನಿರ್ಣಯದಂತೆ ನಡೆದುಕೊಳ್ಳಬೇಕಂತೆ.
ನುಡಿದಂತ ನಡೆದರೆ ಇದೇ ಜನ್ಮ ಕಡೆ ಆತ್ಮಕ್ಕೆ
ಇದು ಶರಣ ಸಂದೇಶ.
ಈ ಎಲ್ಲ ವಾದಗಳಿಗೆ ನಂಬಿಕೆಯೆ ಮೂಲ.
ಇದರ ಮರ್ಮ ನೀನೆ ಬಲ್ಲೆ ಇಷ್ಟಲಿಂಗರೂಪಿ
ಹಂಪೆಯ ವಿರೂಪಾಕ್ಷೇಶ್ವರ.

೧೩೫

ಪರಮಾಣು ಬೀಜವೊಂದು ಶಕ್ತಿಕೇಂದ್ರ.
ಯುರೇನಿಯಂ ಲೋಹದ ಪರಮಾಣು
ಬೀಜ ಅತಿಶಕ್ತಿಶಾಲಿ.
ನ್ಯೂಟ್ರಾನ್ ಕಣಗಳಿಂದ ಇದರ ವಿಭಜನೆ,
ಇದರಿಂದ ಪ್ರಕಟ ಶಕ್ತಿಯ ಮಹಾಪೂರ,
ಉಷ್ಣರೂಪದೀಶಕ್ತಿ ಪ್ರಳಯಾಂತಕ.
ಪರಮಾಣು ಬಾಂಬು ಸೃಷ್ಟಿಗಿದು ಸಹಾಯಕ.
ವಿದ್ಯುತ್ ಆಗಿ ರೂಪುಗೊಂಡಾಗಿದು ಪ್ರಯೋಜಕ.
ಶಕ್ತಿ ಯಾವುದೇ ಇರಲಿ, ಅದರ ಸದುಪಯೋಗವಾಗಲಿ.
ಮಾನವ ಕುಲಕೋಟಿ ಉಳಿಯಲಿ - ಬೆಳೆಯಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೩೬

ನಾಲ್ಕು ಜಲಜನಕ ಪರಮಾಣು ಬೀಜಗಳು
ಸೇರಿದರೆ ಹೀಲಿಯಮ್ ಅನಿಲಸೃಷ್ಟಿ.
ಇದು ಅದ್ಭುತ ಬೀಜಕ್ರಿಯೆ.
ಇದಕೆಬೇಕು ಸಹಸ್ರ ದಶಲಕ್ಷ ಡಿಗ್ರಿ ಉಷ್ಣಮಾನ,
ಇದು ಸೃಷ್ಟಿಯ ಮೂಲಕ್ರಿಯೆ.
ನಕ್ಷತ್ರಗಳ ಅಂತರಾಳದಲಿ ನಡೆಯುವ ಕ್ರಿಯೆ.
ಸೂರ್ಯನ ಅಂತರಾಳದಲಿ ನಡೆಯುವ ಕ್ರಿಯೆ.
ಇದರಿಂದ ಸೂರ್ಯ ಕುಟುಂಬಗಳ ರಕ್ಷಣೆ
ಜಗದಾದಿ ಜೀವಿಗಳ ರಕ್ಷಣೆ. ನಿನ್ನ ಈ ತಂತ್ರ ಬಹು ವಿಚಿತ್ರ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೩೭

ಜೀವನವೊಂದು ಜೇಡರಬಲೆ.
ಜೇಡ ತಾನು ನೆಯ್ದು ಬಲೆಯಲಿ ತಾನೇ ಸಾಯುವದು.
ಮಾನವನ ರೀತಿಯೂ ಹೀಗೆಯೇ.
ನಮ್ಮ ಮನಸ್ಸಿನಿಂದಲೇ ಈ ಬಲೆಯ ಸೃಷ್ಟಿ.
ಆಗುವುದಾಗ ಸುಖದುಃಖಗಳ ಸೃಷ್ಟಿ.
ಆಗ ತಿರುಗುವುದು ಜನನ ಮರಣಗಳ ಚಕ್ರ.
ಒಳಹೊರಗೆ ಶುದ್ಧವಾದಾಗ, ಮನಸ್ಸು
ಮಹಾದೇವನಾದಾಗ ನಿಲ್ಲುವದೀಚಕ್ರ
ನನ್ನಿಂದ ಸೃಷ್ಟಿಯಾದೀ ಚಕ್ರ ನನ್ನಿಂದಲೇ ನಿಲ್ಲಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ ಸೇರಬೇಕು.

೧೩೮

“ದೇಹವೇ ದೇವಾಲಯ,
ಶಿರವೇ ಹೊನ್ನಕಳಸ”ವೆಂದರು ಬಸವಣ್ಣನವರು.
ಶಿರದ ಬ್ರಹ್ಮರಂಧ್ರವೇ ಭಾವಲಿಂಗ.
ಹೃದಯವೇ ಪ್ರಾಣಲಿಂಗ.
ಇದರ ಪ್ರತೀಕವೇ ಇಷ್ಟಲಿಂಗ.
ಇದು ಪ್ರಾಣಭಾವಗಳ ಪ್ರವೇಶದ್ವಾರ.
ಅರಿ, ಇಷ್ಟ, ಪ್ರಾಣ, ಭಾವಗಳ
ಆಗು ನೀಸಚ್ಚಿದಾನಂದಮಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ.

೧೩೯

ಭಾವದಲಿ ಬೇರೂರಲಿ ಸತ್ಯಸಂಧತೆ,
ಪ್ರಾಣದಲಿ ಬೇರೂರಲಿ ವೀರನಿಷ್ಠೆ,
ಕಾಯದಲಿ ಬೇರೂರಲಿ ಪ್ರಾಮಾಣಿಕತೆ,
ಇವು ನಿನ್ನನರಿಯುವ ಮೂಲಸೂತ್ರಗಳು,
ನಡೆಯಲಿ ಸಾಧನೆ ನಿರಂತರ,
ಆಗಲಿ ಬಾಳು ಸುಖಕರ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೪೦

ಮನೆಯೇ ಮೊದಲ ಪಾಠಶಾಲೆ,
ತಾಯಿಯೇ ಮೊದಲ ಶಿಕ್ಷಕಿ,
ತಾಯಂದಿರು ಸಾಕ್ಷರರಾಗಬೇಕು,
ತಾಯಂದಿರು ಸುಶಿಕ್ಷಿತರಾಗಬೇಕು,
ತಾಯಂದಿರು ಸುಸಂಸ್ಕೃತರಾಗಬೇಕು.
ಸ್ತ್ರೀ ಶಿಕ್ಷಣ, ವಯಸ್ಕರ ಶಿಕ್ಷಣ ಕಡ್ಡಾಯವಾಗಬೇಕು.
ಸುಸಂಸ್ಕೃತ ಸಮೃದ್ಧ ಸಮಾಜ ನಿರ್ಮಾಣವಾಗಬೇಕು,
ಇಷ್ಟಲಿಂಗರೂಪಿ ತುಂಪೆಯ ವಿರೂಪಾಕ್ಷೇಶ್ವರ.

೧೪೧

ಜ್ಞಾನವೊಂದು ಮಹಾವೃಕ್ಷ;
ತತ್ವಜ್ಞಾನ, ವಿಜ್ಞಾನ, ಕಲೆ, ಸಾಹಿತ್ಯ,
ಸಂಗೀತಗಳು ಇದರನೇಕ ಶಾಖೆಗಳು.
ಶಿವಜ್ಞಾನವೇ ಇದರ ಬೇರುಗಳು.
ಮೂಲವನರಿತರೆ ಎಲ್ಲವನರಿತಂತೆ.
ಮೂಲವನ್ನರಿತು ಎಲ್ಲವನ್ನು ತಿಳಿದು
ಎಲ್ಲವೂ ತಾನಾಗಬೇಕು,
ಇಷ್ಟಲಿಂಗರೂಪಿ ತುಂಪೆಯ ವಿರೂಪಾಕ್ಷೇಶ್ವರ.

೧೪೨

ಹೂದೋಟದಲಿ ಹಲವಾರು ಹೂಗಳು,
ಅವುಗಳ ಬಣ್ಣ ವೈವಿಧ್ಯಮಯ,
ಅವುಗಳ ಛಾಯೆ ವೈವಿಧ್ಯಮಯ,
ಅವುಗಳ ವರ್ಣದ್ರವ್ಯ ವೈವಿಧ್ಯಮಯ,
ಇವು ನಿಸರ್ಗದತ್ತ ವರ್ಣದ್ರವ್ಯಗಳು,
ನಿಸರ್ಗದದ್ಭುತಗಳು.
ಸಾಧ್ಯವೇ ಯಂತ್ರಗಳಿಂದ ಇವುಗಳ ಸೃಷ್ಟಿ?
ಸಾಧ್ಯವಾದರೂ ಬಲು ಜಟಿಲ.
ನಿನ್ನಿಂದವುಗಳ ಸೃಷ್ಟಿ ಲೀಲಾಜಾಲ
ಇಷ್ಟಲಿಂಗರೂಪಿ ತುಂಪೆಯ ವಿರೂಪಾಕ್ಷೇಶ್ವರ.

೧೪೩

ಪ್ರತಿಯೊಂದು ಧರ್ಮಕ್ಕೆ ಎರಡು ಮುಖಗಳು.
ಸಾಂಪ್ರದಾಯಿಕ ಮುಖ, ನೈತಿಕ ಮೌಲ್ಯಗಳ ಮುಖ.
ನೈತಿಕ ಮೌಲ್ಯಗಳು ಚಿರಂತನ,
ಇವು ಎಲ್ಲ ಧರ್ಮದ ತಿರುಳು.
ಇವುಗಳಾಚರಣೆಯಿಂದ ಸರ್ವಧರ್ಮಸಮನ್ವಯ,
ಸಂಪ್ರದಾಯ ಗೌಣವಾಗಬೇಕು, ಮೌಲ್ಯಗಳ ಕೈ
ಮೇಲಾಗಬೇಕು,
ಧರ್ಮಧರ್ಮಗಳ ಅಂತರ ಅಳಿಯಬೇಕು,
ಮಾನವಕುಲ ಒಂದಾಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೪೪

ಸರ್ವಶೂನ್ಯ, ನಿರಾಲಂಬ ಇದು ಪರತತ್ವ,
ಇದು ಅನಾದಿಲಿಂಗ,
ಲಿಂಗವೆಂದರೆ ದೈವತ್ವದ ಇನ್ನೊಂದು ಹೆಸರು.
ದೈವತ್ವ ಸರ್ವವ್ಯಾಪಿ; ಆಕಾಶದಲ್ಲಿ ಆಕಾಶಲಿಂಗ,
ವಾಯುವಿನಲ್ಲಿ ವಾಯುಲಿಂಗ, ಅಗ್ನಿಯಲ್ಲಿ ಅಗ್ನಿಲಿಂಗ,
ಅಪ್ಪುವಿನಲ್ಲಿ ಅಪ್ಪಲಿಂಗ, ಪೃಥ್ವಿಯಲ್ಲಿ ಪೃಥ್ವಿಲಿಂಗ,
ಇಷ್ಟಲಿಂಗ, ಜಂಗಮಲಿಂಗ, ಪ್ರಾಣಲಿಂಗ,
ಭಾವಲಿಂಗ, ಚರಲಿಂಗ, ಗುರುಲಿಂಗ,
ಪ್ರಸಾದಲಿಂಗ, ಮಹಾಲಿಂಗ;
ಇವು ಲಿಂಗದ ಬೇರೆ ಬೇರೆ ಹೆಸರುಗಳು,
ದೈವತ್ವದ ಬೇರೆ ಬೇರೆ ಹೆಸರುಗಳು.
ಭಕ್ತನ ನಡೆನುಡಿ ಶುದ್ಧವಾದರೆ ಆತನೇ ಲಿಂಗ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೪೫

ಕಲ್ಲಿದ್ದಲು ಬಯಬಿಟ್ಟ ಸೂರ್ಯಶಕ್ತಿ,
ಇದ ಹೀರಿಕೊಂಡು ಬೆಳೆಯುವವು ಗಿಡಮರಗಳು.
ಇವುಗಳಿಂದ ಕಲ್ಲಿದ್ದಲು ಸೃಷ್ಟಿ.
ಅಣು-ಪರಮಾಣುಗಳ ಬೆಸುಗೆ ಸೂರ್ಯಶಕ್ತಿಯಿಂದ,

ಇದು ಅವುಗಳನ್ನು ಬೆಸೆಯುವ ಸಿಮೆಂಟ್.
ಈ ಶಕ್ತಿಯಿಂದಲೇ ಸೂರ್ಯನಿಗೆ ದೇವತೆಯ ಸ್ಥಾನ.
ಮೂಲಶಕ್ತಿಯ ಅಂಶ ಸೂರ್ಯಶಕ್ತಿ.
ಸೂರ್ಯನ ಮೂಲಕ ಆ ಶಕ್ತಿ ನಮ್ಮನ್ನು ರಕ್ಷಿಸುವದಯ್ಯ.
ಸೂಯನೇ ಪ್ರತ್ಯಕ್ಷ ದೇವತೆಯನ್ನು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೪೬

ನ್ಯೂಯಾರ್ಕ್ ದೇವಾಲಯವೊಂದರಲ್ಲಿ
ದೇವತೆಗಳ ಸಮೂಹ,
ವಿಗ್ರಹಗಳ ಸಮೂಹ,
ಇದೊಂದು ದೇವತೆಗಳ ಸಂಕೀರ್ಣ.
ಶಿವ, ಪಾರ್ವತಿ, ವೆಂಕಟೇಶ, ಗಣೇಶ,
ಶಾರದೆ, ಲಕ್ಷ್ಮಿ ಇವರ ವಾಸ ಇಲ್ಲಿಯೇ.
ವಿಗ್ರಹಗಳು ಹಲವಾರು, ದೇವತೆಗಳು ಹಲವಾರು.
ದೈವತ್ವ ಒಂದೇ, ದೈವತ್ವದ ಪೂಜೆ ಒಂದೇ.
ಇವುಗಳ ಪೂಜಾವೈಭವ ಕಣ್ಣಿಗೆ ಹಬ್ಬ,
ಇದು ಮನಕ್ಕೂ ಹಬ್ಬವಾಗಬೇಕು,
ಆತ್ಮಕ್ಕೂ ಹಬ್ಬವಾಗಬೇಕು.
ಇಲ್ಲಿಯ ಬಿಳಿಯನೊಬ್ಬನಿಗೆ
ಭಕ್ತಿಯ ಆವೇಶ,
ವಿಗ್ರಹ ಯಾವುದೇ ಇರಲಿ,
ದೈವ ಯಾವುದೇ ಇರಲಿ,
ಪೂಜೆಗೆ ಭಕ್ತಿಯೇ ಮೂಲವಾಗಬೇಕು.
ಮಾನವ ದೈವತ್ವಕ್ಕೇರಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೪೭

ನಮ್ಮ ಮಕ್ಕಳು ತಪ್ಪಿ ನಡೆದಾಗ
ನಮಗೆಲ್ಲಿಲ್ಲದ ಕೋಪ.
ನಾವು ಮರೆಯುತ್ತೇವೆ, ಅವರು ನಮ್ಮ ಪ್ರತಿರೂಪ.
ನಮ್ಮ ತಪ್ಪುಗಳೇ ಅವರಲ್ಲಿ ಕ್ರಿಯಾಶೀಲ.

ಇದು ಅವರಿಂದ ನಾವು ಕಲಿಯುವ ಪಾಠ.
ನಮ್ಮ ತನುಮನವ ಮೊದಲು ಸಂತೈಸಿಕೊಳ್ಳಬೇಕು,
ಮನವ ಮೊದಲು ಸಂತೈಸಿಕೊಳ್ಳಬೇಕು
ನಾವಾಗಬೇಕು ಪರಿಶುದ್ಧ ಮೊದಲು.
ಆಗ ಅವರಾಗುವರು ನಮ್ಮಂತೆ ಪರಿಶುದ್ಧ.
ಇದು ಮಕ್ಕಳನು ತಿದ್ದುವ ರೀತಿಯಯ್ಯಾ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೪೮

ಇದ್ದಿಲೋ, ಅದು ಇಂಗಾಲದಿನ್ನೊಂದು ರೂಪ,
ಅದು ಸಾಮಾನ್ಯ ಮೂಲಾಂಶ (element)
ಇದು ಹರಳುಗಟ್ಟಿದಾಗ ವಜ್ರ ಸೃಷ್ಟಿ.
ಸಂಸ್ಕಾರದಿಂದ ಇದ್ದಿಲು ವಜ್ರ,
ಸಂಸ್ಕಾರದಿಂದ ಅಸಾಧ್ಯವೂ ಸಾಧ್ಯ.
ಶಿವಸಂಸ್ಕಾರದಿಂದ ಮಾನವ ದೇವನಾಗಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೪೯

ಪರಮಾಣು ಕೇಂದ್ರದಲ್ಲಿ ಪ್ರೋಟಾನ್
ನ್ಯೂಟ್ರಾನ್ ಕಣಗಳು,
ಇದು ಪರಮಾಣು ಬೀಜ.
ಪ್ರೋಟಾನುಗಳ ಸಂಖ್ಯೆ ಬದಲಾದರೆ
ಹೊಸ ಮೂಲಾಂಶ ರಚನೆ.
ಕಬ್ಬಿಣದ ಪರಮಾಣುವಿನಲ್ಲಿ ಇಪ್ಪತ್ತಾರು ಪ್ರೋಟಾನುಗಳು.
ಚಿನ್ನದಲ್ಲಿ ಇವುಗಳ ಸಂಖ್ಯೆ ಎಪ್ಪತ್ತೊಂಬತ್ತು.
ಕಬ್ಬಿಣ ಚಿನ್ನವಾಗುವುದು ಬೀಜಕ್ರಿಯೆ;
ಮಾನವ ದೇವನಾಗುವುದು ಆಧ್ಯಾತ್ಮಕ್ರಿಯೆ,
ಆಧ್ಯಾತ್ಮಿಕ್ರಿಯೆ ನಡೆಯಲಿ,
ಮಾನವ ದೇವನಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೦

ಪುರಾಣಗಳ ಕಥೆಗಳು ರಂಜನೀಯ.
ಇವುಗಳಲ್ಲಿ ಬರುವ ದೇವತೆಗಳು ವರ್ಣಮಯ,
ಕಾಲ್ಪನಿಕಾಂಶಗಳಿದ್ದರೂ ನೈತಿಕ ಮೌಲ್ಯಗಳಿಗಾಶ್ರಯವಿಲ್ಲಿ,
ಈ ದೇವತೆಗಳಿಂದ ಬೆಳೆಯಿತು ಮೂಢನಂಬಿಕೆ,
ಇವುಗಳಿಂದ ಬೆಳೆಯಿತು ಸಾಹಿತ್ಯ, ಸಂಗೀತ, ನೃತ್ಯಕಲೆ
ವಾಸ್ತುಶಿಲ್ಪ, ಮೂರ್ತಿಶಿಲ್ಪ, ಜಾನಪದ.
ಹಂಸಕ್ಷೀರ ನ್ಯಾಯದಂತೆ ಇವ ಸ್ವೀಕರಿಸಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೧

ಬೀಜ ಮೊದಲೋ, ವೃಕ್ಷ ಮೊದಲೋ?
ಸೃಷ್ಟಿ ಮೊದಲೋ, ದೇವರು ಮೊದಲೋ?
ಅಲ್ಲಲ್ಲ! ಇವರೆಡೂ ಅನಾದಿಯೇ?
ಯುಗ ಯುಗಾಂತರಗಳಲಿ ನಡೆಯಿತು ಚರ್ಚೆ,
ಮುಂದೆಯೂ ನಡೆಯಲಿದೆ ಈ ಕುರಿತು ಚರ್ಚೆ
ಪ್ರಶ್ನಾರ್ಥಕ ಚಿಹ್ನೆಯೇ ಇದಕೆ ಉತ್ತರ?
ಸೃಷ್ಟಿ ದೇವರುಗಳ ವಿಷಯ ಏನೇ ಇರಲಿ
ಮಾನವತೆಗೆ ಆದ್ಯತೆ ಸಿಗಲಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೨

ಕರ್ನಾಟಕ ತಮಿಳುನಾಡಿನ ಮಧ್ಯ ಕಾವೇರಿ ಜಲವಿವಾದ,
ಆಂಧ್ರ ಕರ್ನಾಟಕದ ಮಧ್ಯ ಕೃಷ್ಣ ಜಲವಿವಾದ.
ಹಿಮಾಲಯದ ಹಿಮ ಕರಗಿದರೆ ಬ್ರಹ್ಮಪುತ್ರದಲಿ ಮಹಾಪೂರ,
ಗಂಗೆಯಲಿ ಮಹಾಪೂರ, ಆಸ್ತಿಪಾಸ್ತಿ ಜೀವಹಾನಿ ಅಪಾರ.
ಜನತೆಯಲ್ಲಿ ಹಾಹಾಕಾರ!
ಭಾರತದ ನದಿಗಳ ಪರಸ್ಪರ ಸಂಪರ್ಕ ಇದಕೆ ಪರಿಹಾರ.
ಸಮರೋಪಾದಿಯಲಿ ನಡೆಸಬೇಕಿದನು ಭಾರತ ಸರಕಾರ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೩

ಎಂಬತ್ತುನಾಲ್ಕು ಜೀವರಾಶಿಗಳು ಭೂಗ್ರಹದಲ್ಲಿ,
ಇದು ಪುರಾಣದ ಮಾತು.
ದಶಲಕ್ಷಗಟ್ಲೆ ಜೀವರಾಶಿಗಳು ಇಲ್ಲಿ,
ಇದು ವಿಜ್ಞಾನದ ಆವಿಷ್ಕಾರ,
ಏಕಸೂತ್ರತೆಯನು ಕಂಡಿತು ವಿಜ್ಞಾನ,
ಎಲ್ಲ ಜೀವರಾಶಿಗಳಲಿ,
ದೃಢಪಟ್ಟಿತದರಿಂದ ಅದ್ವೈತ ತತ್ವಜ್ಞಾನ.
ಆದಿಯಲಿ ಬೀಜವೊಂದೇ
ಅದರಿಂದುದಯ ಈ ಸೃಷ್ಟಿಯ ಮಹಾವೃಕ್ಷ
ಇದಕೆಲ್ಲ ಮೂಲ ನೀನೇ ಇಷ್ಟಲಿಂಗರೂಪಿ
ಹಂಪೆಯ ವಿರೂಪಾಕ್ಷೇಶ್ವರ.

೧೫೪

ಭಾರತಕ್ಕೆ ಬೇಕು ಗಾಂಧೀಜಿಯ
ತ್ರಿ ಭಾಷಾಸೂತ್ರ,
ಇಂಗ್ಲೀಷ್ ಬೇಕು ಅಂತರ್ರಾಷ್ಟ್ರೀಯ ವ್ಯವಹಾರಕೆ,
ಹಿಂದೀ ಬೇಕು ರಾಷ್ಟ್ರಭಾಷೆಯಾಗಿ,
ಪ್ರಾದೇಶಿಕ ಭಾಷೆ ಬೇಕು ರಾಜ್ಯ ಭಾಷೆಯಾಗಿ.
ಎಲ್ಲರೂ ಕಲಿಯಬೇಕು ರಾಷ್ಟ್ರಭಾಷೆಯ.
ಉತ್ತರದವರು ಕಲಿಯಲಿ ದಕ್ಷಿಣದ ಭಾಷೆಯ.
ಏರ್ಪಡಲಿ ಭಾವೈಕ್ಯತೆ ರಾಷ್ಟ್ರದಲಿ,
ಭಾರತೀಯತೆಯೇ ಇವೆಲ್ಲಕೆ ಮೂಲವಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೫

ದೇವರು ಅನೇಕ ರೂಪದಲ್ಲಿ ಬರುತ್ತಾನೆ,
ಹಸಿದವರಿಗೆ ಅನ್ನದಾತನಾಗಿ ಬರುತ್ತಾನೆ.
ರೋಗಿಗಳಿಗೆ ವೈದ್ಯನಾಗಿ ಬರುತ್ತಾನೆ.
ವಿದ್ಯಾರ್ಥಿಗಳಿಗೆ ಶಿಕ್ಷಕನಾಗಿ ಬರುತ್ತಾನೆ.
ಸಾಧಕರಿಗೆ ಗುರುವಾಗಿ ಬರುತ್ತಾನೆ.
ಬಿಟ್ಟೂಬಿಡದೆ ನಮ್ಮಂತರಂಗದಲಿರುತ್ತಾನೆ.

ನಂಬಿದವರಿಗೆ ಮುಕ್ತಿ ಕೊಡುತ್ತಾನೆ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೬

ಕೂಡಿಟ್ಟ ಹಣ ಕೇಡಿಗೆ ಕಾರಣ.
ಕೂಡಿಡದಿರಾ ಹಣವ.
ಕೆರೆಗೆ ಕೋಡಿ ಬೇಕು
ಮಿತಿಮೀರಿದ ನೀರು ಹರಿದು ಹೋಗಲು.
ಸಂಗ್ರಹವಾದ ಹಣ ವಿನಿಯೋಗವಾಗುತ್ತಲಿರಬೇಕು,
ತನಗಾಗಿ, ಕುಟುಂಬಕ್ಕಾಗಿ, ಸಮಾಜಕ್ಕಾಗಿ ವ್ಯಯವಾಗಬೇಕು.
ದೇಶಕ್ಕೆ ವಿನಿಯೋಗವಾಗಬೇಕು.
ತಾನುಂಡು ಪರರಿಗೆ ಕೊಡದ ಹಣ ಬೀದಿಪಾಲು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೭

ಕಾಯಕವ ಮಾಡು, ಜಂಗಮಕೆ ನೀಡು.
ಉಂಡುಟ್ಟು ಸುಖದಿಂದಿರು,
ಪ್ರಸಾದ ಜೀವಿಯಾಗು,
ಸಜ್ಜನರ ಸಂಗವ ಮಾಡು, ಸರಸ ಸಹನಿಕೆಯಲ್ಲಿರು,
ಅನುಭಾವಗೋಷ್ಠಿಯಲ್ಲೀ ಜಾಡು.
ರೋಗ ಬಂದರೆ ನರಳು, ಮರಣ ಬಂದರೆ
ಮರಳು ನೀ ಬಂದ ಠಾವಿಗೆ.
ಇದು ಜೀವನದಿ ನಾಕಲಿತ ಪಾಠವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೮

ಸತ್ಯದಲಿ ನಡೆವುದೇ ವ್ರತ.
ಕೊಟ್ಟ ಮಾತು ತಪ್ಪದಿರುವದೇ ನೇಮ.
ಆಚಾರವಂತನಾಗುವದೇ ಶೀಲ.
ಕಾಯಕವೇ ಶಿವಪೂಜೆ.
ಸರ್ವಾರ್ಪಣ ಭಾವವೇ ದಾಸೋಹ.
ಬಂದುದ ಮುದದಿಂದ ಸ್ವೀಕರಿಸುವದೇ ಪ್ರಸಾದ.
ಇದೇ ಪ್ರಸಾದ ಜೀವನ, ಇದೇ ಶರಣ ಜೀವನ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೯

ಕಳಬೇಡ, ಹುಸಿಯ ನುಡಿಯಲ ಬೇಡ,
ಇಲ್ಲಿ ಇವುಗಳ ಬೋಧನೆ ಮಾತ್ರ.
ಅಮೆರಿಕಾದಲ್ಲಿ ಇವುಗಳ ಆಚರಣೆ ಮಾತ್ರ.
ಹಾಲು, ಹಣ್ಣು ಬೀದಿಯಲ್ಲಿದ್ದರೂ
ಯಾರೂ ಮುಟ್ಟರು ಅಲ್ಲಿ.
ನಾವು ಹೊರಗೆಬಿಟ್ಟು ಬಂದ ಎಲ್ಲವೂ ಮಾಯ ಇಲ್ಲಿ.
ಬರಿ ತತ್ವಗಳ ಬೋಧನೆ ಸಾಕು, ಆಚರಣೆ ಬೇಕು.
ಇದು ನಮ್ಮ ಬಾಳ ಉಸಿರಾಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೦

ಆಕಳು ಕಪ್ಪಾದರೆ ಹಾಲು ಕಪ್ಪೇ?
ಬಣ್ಣ ಕಪ್ಪಾದರೆ ಗುಣ ಕಪ್ಪೇ?
ಆಫ್ರಿಕಾದ ಜನಕಪ್ಪು, ಅವರ ಗುಣ ಕಪ್ಪಲ್ಲ.
ಅವರ ಬುದ್ಧಿ ಸೂರ್ಯರಶ್ಮಿಯಷ್ಟು ತೀಕ್ಷ್ಣ.
ಸರಿಗಟ್ಟುವರಿವರು ಬಿಳಿಯರನು,
ಆಟ ಓಟಗಳಲಿ ಓದುಬರಹಗಳಲಿ,
ಕುಶಲಕಲೆ, ಸಂಗೀತ, ಚಿತ್ರಕಲೆಯಲ್ಲಿ
ಇವರು ಉಳಿಯಲಿ ಬೆಳೆಯಲಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೧

ದೇಶ ನೋಡು, ಇಲ್ಲವೆ ಕೋಶ ಓದು,
ಇದು ಹಿಂದಿನ ಮಾತು.
ಕೋಶವನ್ನೂ ಓದಬೇಕು,
ದೇಶವನ್ನೂ ನೋಡಬೇಕು,
ಅನುಭವದ ಕ್ಷಿತಿಜವ ವಿಸ್ತರಿಸಿಕೊಳ್ಳಬೇಕು.
ಮನನ ಚಿಂತನದ ಆಳಕ್ಕಿಳಿಯಬೇಕು.
ಜ್ಞಾನಾನುಭವಗಳ ಆನಂದ ಸವಿಯಬೇಕು.
ಅನುಭಾವದತ್ತ ಮನ ತಿರುಗಿಸಬೇಕು.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೨

ಭೂಮಿಯು ಒಂದು ಭಾಗ, ನೀರು ಮೂರು ಭಾಗ
ಭೂಗೋಳದ ಮೈಮೇಲೆ.
ನೆಲ ನೀರಿನಿಂದಲೇ ಈ ಸೃಷ್ಟಿ,
ಧನಧಾನ್ಯಗಳ ಸೃಷ್ಟಿ, ಜೀವರಾಶಿಗಳ ಸೃಷ್ಟಿ.
ನೀರಿನಿಂದಲೇ ಮೋಡಗಳು ಮಳೆ ಬೆಳೆ.
ನೀರಿನಿಂದಲೇ ಸರ್ವಸಂಪತ್ತು.
ಭೂಗೋಳದಿಂದಲೇ ಸರ್ವಸಂಪತ್ತು.
ಇದು ಕಾರಣ ಭೂದೇವಿಗೆ ಪಾರ್ವತಿಯ ಪಟ್ಟ,
ಶಿವನ ತೊಡೆಯ ಮೇಲೆ ಇವಳ ವಾಸ.
ಗಂಗೆಯೇರಿದಳು ಶಿವನ ಜಡೆಯ.
ಪಾರ್ವತಿಯ ಜೊತೆ ಇವಳ ವಾಸ.
ಗಂಗೆ ಗೌರಿ ಶಿವ ಇವರು ಒಬ್ಬರನು ಬಿಟ್ಟು ಇನ್ನೊಬ್ಬರಿಲ್ಲ.
ಇದೊಂದು ಉದಾತ್ತ ಪರಿಕಲ್ಪನೆ.
ಭಾರತೀಯ ಸಂಸ್ಕೃತಿಯ ದಿವ್ಯ ಪರಿಕಲ್ಪನೆ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೩

ಕನ್ಯಾಶುಲ್ಕ ಕೊಟ್ಟು ಹೆಣ್ಣು ತರುವ ಕಾಲವೊಂದಿತ್ತು,
ನಂತರ ಗಂಡಿಗೆ ಬೆಲೆಬಂತು,
ವರದಕ್ಷಿಣೆ ಪದ್ಧತಿ ಜಾರಿಗೆ ಬಂತು.
ಮದುವೆ ಹೆಣ್ಣು ಗಂಡಿನ ಪವಿತ್ರ ಬಂಧನ.
ವಂಶಾಭಿವೃದ್ಧಿಯ ಸಾಧನ.
ಮುಕ್ತಿಪಥಕೆ ಸಾಧನ.
ಬಾಳರಥ ಚಲಿಸಲು ಬೇಕು ಈ ಸಾಧನ.
ಸತಿಪತಿ ಧರ್ಮ, ಶಿವಶಕ್ತಿ ಸಂಪುಟ ಧರ್ಮ.
ಮದುವೆಯಾಗಬಾರದೊಂದು ವ್ಯಾಪಾರ,
ಹೀಗಾದರಿದೊಂದು ಸಾಮಾಜಿಕ ಪಾತಕ.
ನಮ್ಮ ಭವ್ಯ ಪರಂಪರೆಗಿದೊಂದು ಕಲಂಕ,
ತೊಲಗಲೀಪಿಡೆ ನಮ್ಮ ದೇಶದಿಂದ
ಆಗ ನಮ್ಮ ಸಮಾಜವಾಗುವದು ನಿಷ್ಕಳಂಕ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೪

ಸಾಹಿತ್ಯ ಜೀವನದ ಪ್ರತಿಬಿಂಬ,
ಜೀವನ ಉದಾತ್ತವಾಗಲಿದರಿಂದ,
ಪ್ರಗತಿಶೀಲತೆಯ ಹೆಸರಿನಲಿ
ಆಗದಿರಲಿದು ಸಮಾಜಘಾತುಕ,
ಸ್ವೇಚ್ಛಾಚಾರ ಪ್ರಚೋದಕ.
ಇದಾಗಲಿ ಚೈತನ್ಯದ ಚಿಲುಮೆ ನಿರಂತರ.
ಅರಳಲಿ ಮಾನವ ಬಾಳಚಿರಂತನ,
ಹಸನಾಗಲಿದರಿಂದ ಅಂತರಂಗ ಬಹಿರಂಗಗಳು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೫

ಹೆಂಡತಿ ಸತ್ತರೆ ಗಂಡನಿಗಿನ್ನೊಂದು ಮದುವೆ.
ಗಂಡ ಸತ್ತರೆ ಹೆಂಡತಿ ವಿಧವೆ.
ಇದಾವ ನ್ಯಾಯ, ಏನನ್ಯಾಯ?
ಇದು ನಿಸರ್ಗ ನಿಯಮವೆ?
ಅಲ್ಲಲ್ಲ! ಇದು ನಾವು ಮಾಡಿದ ನಿಯಮ;
ಅಸಹಜವೀ ನಿಯಮ.
ವಿಧವೆ ಬಯಸಿದರೆ ಮರುಮದುವೆ ಸಾಧು.
ಪಾಪವಲ್ಲವಿದೆಂದು ಸಾರಿ ಹೇಳಿತು ಶರಣಧರ್ಮ.
ವಿಧವಾವಿವಾಹ ಧರ್ಮಸಮ್ಮತವಾಗಲಯ್ಯ.
ಹೆಣ್ಣು ಗಂಡು ಸಮವೆಂಬ ತತ್ವ ಜಾರಿಗೆ ಬರಲಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೬

ಭಾರತೀಯರೆಲ್ಲ ಒಂದೇ
ಧರ್ಮ ಯಾವುದೇ ಇರಲಿ, ಭಾಷೆ ಯಾವುದೇ ಇರಲಿ
ನಾವೆಲ್ಲ ಒಂದೇ.
ನಾವೆಲ್ಲ ಸಮಾಜವಾದಿ ಗಣರಾಜ್ಯದ ಸದಸ್ಯರು.
ಜಾತಿಯ ಹೆಸರಿನಲಿ ಒಡೆದು ಹೋಗುವುದು ಬೇಡ.
ಭಾಷೆಯ ಹೆಸರಿನಲಿ ಒಡೆದು ಹೋಗುವುದು ಬೇಡ.
ಬೇರೆ ಬೇರೆಯವರಿಗೆ, ಬೇರೆ ಬೇರೆ ಕಾನೂನು ಬೇಡ.
ಜಾರಿಗೆ ಬರಲಿ ನಮ್ಮೆಲ್ಲರಿಗೊಂದೇ ಕಾನೂನು.

ಆಗಲಿ ಮಾದರಿ ಸಮಾಜವಾದಿ ಪ್ರಭುತ್ವ ನಮ್ಮ ರಾಷ್ಟ್ರ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೭

ಭೂಮಿಯ ಸಂಪತ್ತೆಲ್ಲ ಈಶ ಸಂಪತ್ತು.
ದೇಶದ ಸಂಪತ್ತೆಲ್ಲ ರಾಷ್ಟ್ರೀಯ ಸಂಪತ್ತು
ನಮ್ಮೆಲ್ಲರ ಸಂಪತ್ತು.
ಉಳ್ಳವರು ಇಲ್ಲದವರ ಟ್ರಸ್ಟಿಗಳು.
ಉಳ್ಳವರು ವಿನಿಯೋಗಿಸಲಿ ಇಲ್ಲದವರಿಗಾಗಿ,
ಇದು ಸರ್ವಸಮಾನತೆಯ ಮೂಲಸೂತ್ರ,
ಇದು ಆಧ್ಯಾತ್ಮಿಕ ಸಮಾಜವಾದ.
ಇದು ಶರಣರು ತೋರಿಸಿದ ದಾರಿ.
ಇದು ಗಾಂಧೀಜಿ ತೋರಿಸಿದ ದಾರಿ.
ತುಳಿಯೋಣ ಈ ದಾರಿಯ ನಾವು.
ಮಾಡೋಣ ನಮ್ಮ ರಾಷ್ಟ್ರ ಆದರ್ಶಮಯ ನಾವು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೮

ಮಂತ್ರಿಗಳು, ಅಧಿಕಾರಿಗಳು ಜನತೆಯ ಒಡೆಯರಲ್ಲ.
ಜನತೆಯೇ ಒಡೆಯರು ಪ್ರಜಾಪ್ರಭುತ್ವದಲ್ಲಿ.
ಮಂತ್ರಿಗಳು ಅಧಿಕಾರಿಗಳು ಜನಸೇವಕರು.
ಇದು ಗಾಂಧೀಜಿಯವರು ಕಲಿಸಿದ ಪಾಠ.
ಇದಾಗಲಿ ನಮ್ಮ ದೇಶದ ಆಡಳಿತ ತಂತ್ರ
ಹಿಂದಿನ ರಾಜರನುಸರಿಸಿದರೀ ನೀತಿಯ.
ಇಂದಿನ ಆಡಳಿತ ಯಂತ್ರ ಅನುಸರಿಸಲೀ ನೀತಿಯ,
ಶಾಸಕರೂ ಅನುಸರಿಸಲೀ ಮೇಲ್ಪಂಕ್ತಿಯ;
ಆಗಲಿ ನಮ್ಮ ಮಾದರಿ ಪ್ರಜಾಪ್ರಭುತ್ವ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೯

ಭೂಮಿಯ ಅಂತರಾಳದಲಿ ಕರಗಿದ ಲೋಹಗಳು!
ಅದರ ಸುತ್ತಲೂ ಕರಗಿದ ಮಣ್ಣಿನ ಪದರು!

ಬಂಡೆಗಳ ಲೋಕ ಸುತ್ತುವರಿದಿದೆ ಇದನ್ನು!
ಹಲವಾರು ಮೈಲುಗಳ ಮೇಲ್ಕವಚ ಇದರ ಮೇಲೆ.
ಮೇಲ್ಕವಚ ಭೂಗ್ರಹದ ಸಾರಸರ್ವಸ್ವ
ಸಪ್ತ ಸಾಗರವಿರುವದು ಇಲ್ಲಿಯೆ,
ಗುಡ್ಡ ಬೆಟ್ಟ ಪರ್ವತಗಳಿರುವದು ಇಲ್ಲಿಯೆ,
ನದಿ ನಾಲೆಗಳು ಹರಿವುದು ಇದರ ಮೇಲೆಯೆ,
ಜೀವಿಗಳ ವಾಸ ಇದರ ಮೇಲೆಯೆ,
ಭೂಮಿಯ ಸಂಪತ್ತೆಲ್ಲ ಇಲ್ಲಿಯೆ,
ಇದೇ ಮಾನವನ ಆಶ್ರಯ ಸ್ಥಾನ.
ಇಲ್ಲಿಯೇ ಸ್ವರ್ಗ, ಇಲ್ಲಿಯೇ ನರಕ.
ಇಲ್ಲಿಯೇ ಕೈಲಾಸ, ಇಲ್ಲಿಯೇ ವೈಕುಂಠ.
ಮಾರಕಾಸ್ತ್ರಗಳಿಂದಿದು ನಾಶವಾಗದಿರಲಿ.
ಭೂಕಂಪ ಪ್ರಕೃತಿ ವಿಕೋಪಗಳಿಗಿದು ಬಲಿಯಾಗದಿರಲಿ.
ಇದು ಮಾನವರು ಮಾನವರಾಗಿ ಬಾಳುವ ಠಾವಾಗಲಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೭೦

ಭೂಗ್ರಹದ ಮೇಲೆ ಅನೇಕ ರಾಷ್ಟ್ರಗಳ ಅಧಿಪತ್ಯ.
ಕೆಲವು ಪ್ರಗತಿಪರ ರಾಷ್ಟ್ರಗಳು, ಕೆಲವು ಪ್ರಗತಿಶೀಲ ರಾಷ್ಟ್ರಗಳು,
ಕೆಲವು ಬಡರಾಷ್ಟ್ರಗಳು, ಕೆಲವು ಶ್ರೀಮಂತ ರಾಷ್ಟ್ರಗಳು.
ರಾಷ್ಟ್ರಗಳು ಬೇರಾದರೇನು? ಮಾನವಕುಲ ಒಂದೇ.
ಅವರ ಧರ್ಮಗಳು ಬೇರಾದರೇನು? ಮಾನವಕುಲ ಒಂದೇ.
ಅವರಾಡುವ ಮಾತು ಬೇರಾದರೇನು? ಮಾನವ ಕುಲ ಒಂದೇ.
ಏರ್ಪಡಲಿ ಸಹಕಾರ ರಾಷ್ಟ್ರ ರಾಷ್ಟ್ರಗಳ ಮಧ್ಯೆ.
ಭಾಗಿಯಾಗಲೆಲ್ಲರು ಪರಸ್ಪರ ಕಷ್ಟಸುಖಗಳ ಮಧ್ಯೆ.
ಇದೊಂದು ವಿಶ್ವಕುಟುಂಬವಾಗಿ ಬಾಳಲಿ,
ಹೊಸ ಸಹಸ್ರಮಾನದ ಘೋಷಣೆ ಇದಾಗಲಿ,
ಸಂಯುಕ್ತ ರಾಷ್ಟ್ರ ಈ ಗುರಿಯ ಸಾಧಿಸಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೭೧

ಧರ್ಮದ ಹೆಸರಿನಲಿ ಯುದ್ಧ ಬೇಡ,
ಭಾಷೆಯ ಹೆಸರಿನಲಿ ಯುದ್ಧ ಬೇಡ,

ಗಡಿ ವಿಸ್ತರಣೆಗಾಗಿ ಯುದ್ಧ ಬೇಡ,
ಈ ಮಾತುಗಳೀಗ ಅರ್ಥಹೀನ,
ಈ ವಾದಗಳೀಗ ಹಳೆಯ ಮಾತುಗಳು.
ಬೇಕೀಗ ಯುದ್ಧ ಬಡತನ ನಿವಾರಣೆಗೆ,
ಬೇಕೀಗ ಯುದ್ಧ ಸರ್ವಸಮಾನತೆಗೆ,
ಬೇಕೀಗ ಯುದ್ಧ ರೋಗ ರುಜಿನಗಳ ಹೊಡೆದೋಡಿಸಲು.
ಬೇಕೀಗ ಯುದ್ಧ ಅಜ್ಞಾನ ತೊಲಗಿಸಲು,
ಮೂಢನಂಬಿಕೆಗಳ ಹೇಳ ಹೆಸರಿಲ್ಲದಂತೆ ಮಾಡಲು,
ನಡೆಯಲೀಗ ಅಹಿಂಸಾತ್ಮಕ ಸಮರ ಇವ ಸಾಧಿಸಲು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೭೨

ಸದಾ ಇಷ್ಟಲಿಂಗ ದೇಹದ ಮೇಲೆ ಧರಿಸುವದೇ ಲಿಂಗಾಚಾರ.
ಒಪ್ಪತ್ತಾದರೂ ಅದನು ಪೂಜಿಸುವದೇ ಲಿಂಗಾಚಾರ.
ಭಕ್ತರಲ್ಲಿ ಭೇದ ಮಾಡದೆ ಕೊಡಕೊಳ್ಳುವದೇ ಶಿವಾಚಾರ.
ಎಲ್ಲರಲ್ಲಿ ಶಿವನ ಕಾಣುವದೇ ಶಿವಾಚಾರ.
ಕೈಕೊಂಡ ಕೆಲಸದಲ್ಲಿ ತನ್ಮಯತೆಯೇ ಸದಾಚಾರ.
ಲೋಭಿಯಾಗದೆ ಸಮಾಜಕ್ಕೆ ನೀಡುವದೇ ಸದಾಚಾರ.
ಸಚ್ಚರಿತ, ಸಜ್ಜನನಾಗುವದೇ ಸದಾಚಾರ.
ವಿನಯದ ನಡತೆಯೇ ಭೃತ್ಯಾಚಾರ.
ಸದುವಿನಯೇ ಸದಾಶಿವನೊಲಮೆಯೆಂದಾಚರಿಸುವದೇ ಭೃತ್ಯಾಚಾರ.
ತನ್ನತನಕ್ಕೆ ಭಂಗ ಬಂದಲ್ಲಿ ತನ್ನನು ರಕ್ಷಿಸಿಕೊಳ್ಳುವದೇ ಗಣಾಚಾರ.
ಇದೇ ಧಾರ್ಮಿಕ ನೀತಿ, ಸಾಮಾಜಿಕ ನೀತಿ
ಇದೇ ಸಂಸಾರಯೋಗವನಾಚರಿಸುವ ರೀತಿ.
ಸಂಸಾರ ಸಾಗರವ ದಾಟುವ ರೀತಿ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನರಿಯುವ ರೀತಿ.

೧೭೩

ಗುಣವರಿತು ಗೆಳೆತನ ಮಾಡು,
ಗುಣವರಿತು ಸಂಬಂಧ ಮಾಡು,
ಗುಣಗೇಡಿಗಳ ಸಹವಾಸ
ಅಧಃಪತನಕ್ಕೆ ಔತಣ ನೀಡಿದಂತೆ.

ಸತ್ಸಂಗವದೇ ರಾಜಮಾರ್ಗ ಕೈಲಾಸಕ್ಕೆ,
ಒಳ್ಳೆಯವರೊಡನಾಡಿ ಒಳ್ಳೆಯವನಾಗು,
ಒಳ್ಳೆಯದನ್ನೇ ಬಯಸಿ ಒಳ್ಳೆಯದನ್ನೇ ಪಡೆ.
ಒಳ್ಳೆಯದೇ ಸತ್ಯದ ಇನ್ನೊಂದು ಹೆಸರಲ್ಲವೆ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೭೪

ಗುಮ್ಮ ಬಿಮ್ಮಾಗಿರಬೇಡ,
ನಗುನಗುತ ಬಾಳು,
ನಿನ್ನಲ್ಲಿರುವ ಅಜ್ಞಾನಕ್ಕೆ ನಗು,
ಸುಜ್ಞಾನೋದಯವಾದಾಗ ಸಂತಸದಿ ನಗು.
ದುಃಖದಲ್ಲಿದ್ದಾಗ ನಗು, ಸುಖದಲ್ಲಿದ್ದಾಗ ನಗು.
ನಗು ಅಗಲಿ ಬಾಳದಾರಿಗೆ ಊರಗೋಲು.
ಆಗಲಿ ಬಾಳ ಪರಿಪೂರ್ಣತೆಗೆ ಮೀಸಲು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೭೫

ಮಾತನಾಡುವದೊಂದು ಕಲೆ,
'ಮಾತು ಬಲ್ಲವನಿಗೆ ಜಗಳವಿಲ್ಲ'.
ಮಾತಿನಿಂದಲೇ ಸ್ವರ್ಗ, ಮಾತಿನಿಂದಲೇ ನರಕ.
ಮಾತಿನಿಂದಲೇ ಯುದ್ಧ, ಮಾತಿನಿಂದಲೇ ಶಾಂತಿ.
ಮಾತನಾಡಿದರೆ ಚಂದ್ರೋದಯವಾದಂತಿರಬೇಕು.
ಮಾತನಾಡಿದರೆ ಕೇಳುವವರ ಮನ ಅರಳಬೇಕು.
ಮಾತು ಹೃದಯದಿಂದ ಹೊರಟು, ಹೃದಯಕ್ಕೆ
ಮುಟ್ಟುವಂತಿರಬೇಕು.
ಜನಮೆಚ್ಚಿ ಅಹುದಹುದೆನಬೇಕು, ಶಿವಮೆಚ್ಚಿ ಹರಸಬೇಕು.
ಮಾತೇ ಜ್ಯೋತಿರ್ಲಿಂಗವಾಗಬೇಕು, ಮಾತಾಡಿದಂತೆ ನಡೆಯಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೭೬

ಉಪಕಾರ ಮಾಡಿದವರಿಗೆ ಉಪಕಾರ ಮಾಡು,
ಇದು ಸಾಧ್ಯವಾಗದಿರೆ ಅಪಕಾರವನ್ನಂತೂ ಮಾಡಬೇಡ.

ಅಪಕಾರ ಮಾಡಿವರದರ ಫಲ ಇಲ್ಲಿಯೇ ಅನುಭವಿಸುವರು,
ಈ ಜನ್ಮದಲ್ಲಿಯೇ ಅನುಭವಿಸುವರು.
ಅಪಕಾರ ಮಾಡಿದವರಿಗೆ ಉಪಕಾರ ಮಾಡುವವರು ಹಿಂದೆ ಇದ್ದರು,
ಈಗಲೂ ಇದ್ದಾರೆಯೆ?
ಇದ್ದರೆ ಅವರ ಪಾದಂಗಳಿಗೆ ನಮೋನಮೋ ಎಂಬೆನಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೭

ಗಂಡುಗಳಿಗೆ ಹೆಣ್ಣು ನೋಡಿ ಮದುವೆ ಮಾಡುವರು.
ತಾವು ಮೆಚ್ಚಿ ತಂದ ಹೆಣ್ಣುಗಳೇ ಮನೆಗೆ ಮಾರಿಯಾಗುವರು.
ಮನೆಯಾಗುವದು ಕುರುಕ್ಷೇತ್ರ ಇವರಿಂದ.
ಬಹುಶಃ ವ್ಯಾಸ ಮಹಾಭಾರತ ಇದ ತಿಳಿಸಲೇ ಬರೆದಿರಬೇಕು,
ಬಹುಶಃ ಶಿವ ನರಪೀಳಿಗೆಗೆ ಬುದ್ಧಿ ಕಲಿಸಲೆಂದು ಈ ನಾಟಕ
ಹೂಡಿರಬೇಕು.
ಈ ನಾಟಕವ ಸುಖಾಂತವ ಮಾಡಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೮

ಅವಿಭಕ್ತ ಕುಟುಂಬದ ಕಾಲ ಹೋಯಿತು;
ಇದೀಗ ವಿಭಕ್ತ ಕುಟುಂಬಗಳ ಕಾಲ.
ಒಟ್ಟಿಗಿದ್ದು ರಣರಂಗಕ್ಕಿಳಿಯುವದು ಬೇಡ.
ದೂರವಿದ್ದು ನೆಮ್ಮದಿಯಿಂದಿರುವದೇ ಲೇಸು.
ದೂರವಿದ್ದು ಪ್ರೀತಿಯಿಂದಿರುವದೇ ಲೇಸು.
ಹಳೆಯ ಮೌಲ್ಯಗಳು ಬಾಡುತ್ತವೆ, ಹೊಸ ಮೌಲ್ಯಗಳು ಚಿಗುರುತ್ತವೆ.
'ಕಾಲಾಯತಸ್ಮೈ ನಮಃ' ಬದಲಾವಣೆಯೇ ಇದರ ಮೂಲಸ್ವರೂಪ.
ಬದಲಾದ ಮೌಲ್ಯಗಳಿಗೆ ಹೊಂದಿಕೊಳ್ಳಬೇಕಯ್ಯ.
ಪ್ರೇಮವೇ ಜೀವರಸ, ಪ್ರೀತಿಯೇ ಅಮೃತ,
ಇದನುಳಿಸಿಕೊಳ್ಳಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೨೯

ಶರಣಧರ್ಮ ಗಂಡು ಹೆಣ್ಣಿನಲಿ ಭೇದ ಮಾಡದಯ್ಯಾ,
ಗಂಡಿನಂತೆ ಹೆಣ್ಣಿಗೂ ತಂದೆಯ ಆಸ್ತಿಯಲಿ

ಪಾಲಿರಬೇಕಯ್ಯ.
ಇದು ಕಾನೂನಿನಿಂದ ಸಾಧ್ಯವಾಗದಯ್ಯ,
ಮಾತಾಪಿತರೇ ಇದ ಜಾರಿಗೆ ತರಬೇಕಯ್ಯ.
ಇದು ಶರಣಧರ್ಮದ ಕಾನೂನಾಗಬೇಕಯ್ಯ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೦

ಗ್ರಾಮಗಳು ಭಾರತದ ಜೀವಾಳವಯ್ಯ.
ಇದು ಗ್ರಾಮಗಳ ದೇಶವಯ್ಯ.
ಗ್ರಾಮಗಳ ಅಭಿವೃದ್ಧಿ ರಾಷ್ಟ್ರಾಭಿವೃದ್ಧಿಯಯ್ಯ.
ಗ್ರಾಮೀಣ ಸಂಸ್ಕೃತಿ ಇಂದು ದಾರಿ ತಪ್ಪಿದೆಯಯ್ಯ.
ಮಾನವೀಯ ಮೌಲ್ಯಗಳಿಗಿಲ್ಲಿ ತಿಲಾಂಜಲಿಯಯ್ಯ.
ಅನಾಚಾರ, ಅವ್ಯವಹಾರ, ಕಳವು, ಹಾದರ, ಕೊಲೆ,
ಸುರಾಪಾನ, ಮಾಂಸಭಕ್ಷಣೆ, ಹಿಂಸಾಚಾರ, ಕುಡಕ ರಾಜಕಾರಣಗಳಿಗಿವು
ಬೀಡಾಗಿವೆಯಯ್ಯ, ಇವು ಮುಂದುವರೆದರೆ ಅನಾಹುತವಯ್ಯ.
ಭಾರತೀಯ ಹೆಮ್ಮೆಯ ಸಂಸ್ಕೃತಿ ಅಳಿಸಿ ಹೋಗುವದಯ್ಯ.
ಇವುಗಳ ಸುಧಾರಣೆಗಿಂದು ಆದ್ಯತೆ ನೀಡಬೇಕಯ್ಯ,
ಕೈಮೀರುವ ಮೊದಲೇ ಇದು ನಡೆಯಲಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೫೧

ಇಂದಿನ ಮಕ್ಕಳು ನಾಳಿನ ನಾಗರಿಕರು.
ಇವರಿಗೆ ಬೇಕಿಂದು ಮಾದರಿ ಶಿಕ್ಷಣ.
ಸಾಮಾನ್ಯ ನೀತಿ, ದೈವ ಭಕ್ತಿ.
ಮಾನವೀಯ ಮೌಲ್ಯಗಳು, ಪರಧರ್ಮ ಸಹಿಷ್ಣುತೆ,
ಸಮತಾಭಾವ, ವೈಜ್ಞಾನಿಕತೆ, ವೈಚಾರಿಕ ಮನೋಭಾವ
ಇವು ಪ್ರಾಥಮಿಕ ಶಿಕ್ಷಣದ ಅಂಗವಾಗಬೇಕಯ್ಯ.
ಭಾರತೀಯ ಸಂಸ್ಕೃತಿಯ ಪರಿಚಯ ಇವರಿಗಾಗಬೇಕಯ್ಯ.
ಪಠ್ಯಪುಸ್ತಕಗಳೀರೀತಿ ರಚನೆಯಾಗಬೇಕಯ್ಯ.
ಇದು ನಮ್ಮ ಅಳಿವು ಉಳಿವಿನ ಸಮಸ್ಯೆಯಯ್ಯ.
ಸಮರೋಪಾದಿಯಲಿ ಕೆಲಸ ನಡೆಯಲಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೨

'ಅಲ್ಪವಿದ್ಯಾ ಮಹಾಗರ್ವಿ'
ಎಂಬ ಮಾತು ಇಂದಿನ ಯುವಕರಿಗನ್ವಯ,
ತುಂಬಿದ ಕೊಡ ತುಳುಕುವದಿಲ್ಲ.
ಪ್ರಗಾಢಪಂಡಿತರು, ಜ್ಞಾನಿಗಳು ವಿಜ್ಞಾನಿಗಳು,
ತುಂಬಿದ ಕೊಡದಂತೆ, ಜ್ಞಾನಜ್ಯೋತಿಗಳಂತೆ.
ಅಲ್ಲಷ್ಟು, ಇಲ್ಲಷ್ಟು ಓದಿಕೊಂಡು
ಜ್ಞಾನಭಂಡಾರಿಗಳೆಂದು ಮೆರೆಯುವವರ
ನೋಡಲಾಗದು ನುಡಿಸಲಾಗದು,
ಇದು ಇಂದಿನ ಪದವೀಧರರ ರೀತಿ.
ಇವರಿಂದ ಶಿಕ್ಷಣ ರಂಗಕ್ಕೆ ಫಜೀತಿ.
ದೇಶಕ್ಕೆ ಅಸುರಕ್ಷತೆ ಅಭದ್ರತೆಯ ಭೀತಿ.
ಇವರ ರೀತಿ ಬದಲಾಗಬೇಕಯ್ಯ
ನಮ್ಮ ದೇಶ ಉಳಿಯಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೩

ಇಂದಿನ ಕುಟುಂಬಗಳಲ್ಲಿ ಸಮಸ್ಯೆಗಳನೇಕ.
ಶಿಸ್ತು, ಸಂಯಮ, ಸಮಾನತೆ, ಭ್ರಾತೃಭಾವ,
ಪ್ರೀತಿ, ಸಾಮರಸ್ಯ ಭಾವಗಳಿಂದ ಇವು ಬಹುದೂರ.
ಇವು ಇಂದಿನ ಸಾಮಾಜಿಕ ಮೌಲ್ಯಗಳು
ಹಳೆಯವಾದರೂ ಹೊಸ ಮೌಲ್ಯಗಳು.
ಹಿರಿಯರಲ್ಲಿ ವಿಧೇಯತೆ, ಭಯಭಕ್ತಿ,
ದೈವನಿಷ್ಠೆ, ಸತ್ಯಸಂಧತೆ, ಸತ್‌ಪರಂಪರೆಯಲ್ಲಿ ನಂಬಿಕೆ
ಇವು ಹಳೆಯ ಮೌಲ್ಯಗಳು, ಹಳೆಯವಾದರೂ
ಹೊಸ ಮೌಲ್ಯಗಳು.
ಇವೆರಡರಿಂದ ಬಹುದೂರ ಇಂದಿನ ಕುಟುಂಬ ವ್ಯವಸ್ಥೆ.
ಹಳೆಯ ದಾರಿಯಲ್ಲಾದರೂ ನಡೆ
ಹೊಸ ದಾರಿಯನ್ನಾದರೂ ಅನುಸರಿಸು
ಈ ಮಧ್ಯ ತ್ರಿಶಂಕುಸ್ಥಿತಿ ಅಪಾಯಕಾರಿಯಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೪

ಗಾಜಿನ ಮನೆಯಲ್ಲಿರುವವರು
ಅನ್ಯಗಾಜಿನಮನೆಗೆ ಕಲ್ಲೆಸೆಯಬಾರದು.
ತಮ್ಮ ಹಿತವ ಬಯಸುವವರು ಅನ್ಯರಿಗೆ
ಅಹಿತ ಬಯಸಬಾರದು.
ತಮಗೇನು ಬೇಡವೊ ಅನ್ಯರಿಗೆ ಅದನ್ನೆಸಗಬಾರದು.
ತೋರಿಕೆಗಿದು ಸರಳಸೂತ್ರ,
ಆಚರಣೆ ಕಷ್ಟ, ಆಚರಿಸದೆ ವಿಧಿಯಿಲ್ಲ.
ಇದನಾಚರಿಸಲೇಬೇಕು ಜೀವನದಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೫

ಗ್ರಂಥಾಲಯಗಳು ಶಾರದೆಯ ಮಂದಿರಗಳು
ಶಾರದೆಯ ಪೂಜಿಸುವದರಿಂದೇನು ಫಲ?
ಗ್ರಂಥಾಧ್ಯಯನವೇ ನಿಜವಾದ ಪೂಜೆ
ಜ್ಞಾನಾರ್ಜನೆಯೇ ನಿಜವಾದ ಪೂದೆ.
ಜ್ಞಾನವೇ ಶಕ್ತಿ, ಸಕಲಶಕ್ತಿಗಳ ಆಗರ,
ಇದ ಮೀರಿಸುವದಾವುದೂ ಇಲ್ಲ.
ಜ್ಞಾನರತ್ನವ ಪಡೆ, ಬಾಳಸಫಲತೆ
ಯಲ್ಲಿ ನಡೆ. ಇದು ಹಿಂದಿನ ಸತ್ಯ
ಇಂದಿನ ಸತ್ಯ ಎಂದೆಂದಿಗೂ ಸತ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೬

ನೀನು ಕಲಿ, ಬೇರೆಯವರಿಗೆ ಕಲಿಸು.
ಕಲಿಯುವದು ಧರ್ಮ, ಕಲಿಯುತ್ತ ಕಲಿಸುವುದು
ಪರಧರ್ಮ,
ದೂರವಾಗಲಿದರಿಂದ ನಿರಕ್ಷರತೆಯ ಕರ್ಮ.
ಮಕ್ಕಳು ಕಲಿಯಲಿ, ಹೆಣ್ಣು ಕಲಿಯಲಿ
ಗಂಡು ಕಲಿಯಲಿ, ವೃದ್ಧರು ಕಲಿಯಲಿ
ಕಲಿಕೆಯಾಗಲಿ ನಿರಂತರಪ್ರಕ್ರಿಯೆ.
ಇದರಿಂದ ಬಾಳಾಗಲಿ ನಿರಂತರ ಸಕ್ರಿಯೆ.

ಸಮಸ್ಯೆಗಳ ಪರಿಹಾರಕ್ಕಿದಾಗಲಿ ದಾರಿ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೭

ಒಂದಕ್ಷರವ ಕಲಿಸಿದಾತನೆ ಗುರು,
ಮಗುವಿನಿಂದ ಕಲಿ, ತಂದೆಯಿಂದ ಕಲಿ,
ತಾಯಿಯಿಂದ ಕಲಿ, ಮಕ್ಕಳಿಂದ ಕಲಿ,
ಹೆಂಡತಿಯಿಂದ ಕಲಿ, ನೌಕರರಿಂದ ಕಲಿ,
ಪುಸ್ತಕದಿಂದ ಕಲಿ, ಪತ್ರಿಕೆಯಿಂದ ಕಲಿ,
ಧರ್ಮಗುರುಗಳಿಂದ ಕಲಿ, ವೈರಿಗಳಿಂದ ಕಲಿ,
ಮಿತ್ರರಿಂದ ಕಲಿ, ಇವರೆಲ್ಲ ಗುರುಸಮಾನರು.
ಒಬ್ಬರ ಅನುಭವ ಇನ್ನೊಬ್ಬರಿಗೆ ಮಾರ್ಗದರ್ಶನ,
ಬಾಳದರ್ಶನ, ದಿವ್ಯದರ್ಶನ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೮

ಭಾರತ ಒಕ್ಕಲುತನದ ದೇಶ,
ಒಕ್ಕಲುತನ ಈ ದೇಶದ ಬೆನ್ನೆಲುಬು,
ಇದರ ಆಗು ಹೋಗುಗಳಿಗೆ ಸೂಕ್ತ ನೀತಿ ಬೇಕು.
ಹಳೆ ಹೊಸ ರೀತಿಯ ಸಮ್ಮಿಲನದಿಂದ
ನೂತನ ರೀತಿ ಹೊರ ಹೊಮ್ಮಬೇಕು.
ಸುಶಿಕ್ಷಿತ ಯುವಕರು ಈ ವೃತ್ತಿಗೆ ಬರಬೇಕು.
ಈ ಶಿಕ್ಷಣಕ್ಕೆ ಆದ್ಯತೆ ಇರಬೇಕು.
ನಮ್ಮ ಪರಿಸರಕ್ಕದು ಹೊಂದಿಕೆಯಾಗಬೇಕು.
ನಿರುದ್ಯೋಗ ಸಮಸ್ಯೆ ಬಗೆಹರಿಯಬೇಕು.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೮೯

ನಮ್ಮ ಶಿಕ್ಷಣ ನೀತಿ ಬದಲಾಗಬೇಕು.
ಪಡೆದ ಶಿಕ್ಷಣ ಅರ್ಥಪೂರ್ಣವಾಗಿರಬೇಕು.
ವೃತ್ತಿ ಶಿಕ್ಷಣಕ್ಕೆ ಸಿಂಹಪಾಲಿರಬೇಕು.
ಪದವಿ ಪಡೆದ ಕೂಡಲೇ

ವೃತ್ತಿಯನ್ನ ಅವಲಂಬಿಸುವಂತಿರಬೇಕು.
ಪದವೀಧರರು ಮತ್ತು ಉಪಲಬ್ಧ
ಉದ್ಯೋಗಗಳಲ್ಲಿ ಹೊಂದಾಣಿಕೆ ಇರಬೇಕು.
ಇವೆರಡರಲ್ಲಿ ಸಮನ್ವಯವಿರಬೇಕು.
ನಿರುದ್ಯೋಗ ಸಮಸ್ಯೆಗೆ ಪರಿಹಾರ ಸಿಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೦

ಅಮೆರಿಕಾದ ಹಳ್ಳಿಗಳಲಿ ಲಭ್ಯ, ಎಲ್ಲ ಸೌಕರ್ಯಗಳು,
ಹಳ್ಳಿ ಪಟ್ಟಣಗಳಲ್ಲಿ ಭೇದವೇ ಇಲ್ಲ ಅಲ್ಲಿ.
ಭಾರತ ಹಳ್ಳಿಗಳ ದೇಶ, ಇಲ್ಲಿಯ ಹಳ್ಳಿಗಳು
ಅಮೆರಿಕಾದ ಹಳ್ಳಿಗಳಾಗಬೇಕು.
ಹೊಸ ನಾಗರಿಕತೆಯ ಸೌಲಭ್ಯಗಳೊದಗಿ ಬರಬೇಕು.
ಕೃಷಿ ಪದವೀಧರರಲ್ಲಿ ನೆಲಸಿ ಕೃಷಿ ನಿರತರಾಗುವಂತಿರಬೇಕು.
ನೀರು, ಗೊಬ್ಬರ, ಆಧುನಿಕ ಉಪಕರಣ ಲಭ್ಯವಿರಬೇಕು.
ನದಿಗಳ ಪರಸ್ಪರ ಸಂಪರ್ಕದಿಂದ ನೀರಿನ ಸಮಸ್ಯೆ ಬಗೆಹರಿಯಬೇಕು.
ಹಳ್ಳಿ ಪಟ್ಟಣಗಳ ಮಧ್ಯೆ ಸರ್ವಋತು ರಸ್ತೆಗಳಿರಬೇಕು
ಈ ಸೌಕರ್ಯಗಳೊದಗಿ ಬರಲಿ, ಕೃಷಿ ಬೆಳೆಯಲಿ,
ನಮ್ಮ ದೇಶ ಉದ್ಧಾರವಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೧

ಲಿಂಗಾಯತ ಸಂಸ್ಕೃತಿ ಗುಡಿ ಸಂಸ್ಕೃತಿಯಲ್ಲವಯ್ಯ,
ಪ್ರತಿಯೊಂದು ಹಳ್ಳಿಗಳಲ್ಲಿ ಶಿವಾಲಯಗಳಿರುವವಯ್ಯ
ನಮ್ಮದು ಅನುಭವ ಮಂಟಪದ ಸಂಸ್ಕೃತಿಯಯ್ಯ,
ಇವು ನಮ್ಮ ಅನುಭವ ಮಂಟಪಗಳಾಗಬೇಕಯ್ಯ,
ಅನುಭಾವಗೋಷ್ಠಿಯ ಕೇಂದ್ರಗಳಾಗಬೇಕಯ್ಯ,
ಸಾಹಿತ್ಯ ಸಂಸ್ಕೃತಿಗಳ ಕೇಂದ್ರಗಳಾಗಬೇಕಯ್ಯ,
ಸರ್ವಧರ್ಮ ಸಮನ್ವಯದ ಕೇಂದ್ರಗಳಾಗಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೬೨

ವೀರಶೈವ ಧರ್ಮಾಚರಣೆಯಲ್ಲಿ ಏಕಸೂತ್ರತೆ ಇಲ್ಲವಯ್ಯ
ಹೋಮ ಹವನ ಸಂಸ್ಕೃತಿ ನಮ್ಮದಲ್ಲವಯ್ಯ, ಇದು
ಗುರು ಲಿಂಗ ಜಂಗಮ, ಕಾಯಕ, ದಾಸೋಹ ಸಂಸ್ಕೃತಿಯಯ್ಯ.
ಇದರಾಚರಣೆ ಸಾರ್ವತ್ರಿಕವಾಗಬೇಕಯ್ಯ.
ಈ ಆಚರಣೆ ಎಲ್ಲೆಲ್ಲಿಯೂ ನೆಲೆನಿಲ್ಲಬೇಕಯ್ಯ.
ಮಠಾಧೀಶರು ಇದ ಸಾಧಿಸಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೩

ಸತಿಪತಿಗಳಿಬ್ಬರು ಬಾಳಪಥಿಕರಯ್ಯ.
ಇವರ ಸಮರಸ ಬಾಳು ಹಾಲು ಜೇನಯ್ಯ.
ಸಂಸಾರ ಸಾಗರ ದಾಟುವ ಹರಿಗೋಲಿದಯ್ಯ.
ಸತಿಯನಗಲಿದ ಬಾಳು ಬರಡು ಬಾಳು,
ಪತಿಯನಗಲಿದ ಬಾಳು ನರಕ ಈ ಲೋಕದಲ್ಲಿ
ಆಗಲಿ, ಆಧ್ಯಾತ್ಮದ ನೆನಹು ಬಾಳಿಗಾಧಾರವಯ್ಯ.
ಈ ನೆನಹೇ ಚೈತನ್ಯವಾಗಿ ಮುನ್ನಡಸಬೇಕಯ್ಯ.
ಲಿಂಗವಾಗಿರುವ ಬಾಳ ಸಂಗಾತಿಯ ಸೇರಲು,
ತಾನೇ ಲಿಂಗವಾಗಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೪

ಮಠಗಳಿಂದು ಆಧುನಿಕ ಶಿಕ್ಷಣದ ಕೇಂದ್ರಗಳಯ್ಯ.
ಆಧ್ಯಾತ್ಮಕ್ಕಿಲ್ಲಿ ಎರಡನೆ ಸ್ಥಾನವಯ್ಯ.
ಆಧ್ಯಾತ್ಮವಿಚಾರ ಪ್ರಚಾರವೇ ಮೂಲವಾಗಬೇಕಯ್ಯ.
ಆಧ್ಯಾತ್ಮವನುಳಿಸುವದು ಬೆಳೆಸುವದು ಇವುಗಳಿಂದಲೇ ಸಾಧ್ಯವಯ್ಯ.
ಮಠಾಧೀಶರು ಇದನರಿತು ಆಚರಿಸಲಯ್ಯ.
ಧರ್ಮ ಸಾಹಿತ್ಯ ಸಂಸ್ಕೃತಿ ಅನುಭವ ಅನುಭಾವಗಳನುಳಿಸಲಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೫

ಕಾವಿ ಬಟ್ಟೆಗೆ ಇನ್ನೂ ಮರ್ಯಾದೆ ಇದೆಯಯ್ಯ.
ಕಾವಿಧಾರಿಗಳ ಕಂಡರೆ ಜನ ಕಾಲಿಗೆರಗುವರಯ್ಯ.

ಅವರಂತರಂಗವನ್ನು ನೋಡದೆ ಬಹಿರಂಗಕ್ಕೆ ನಮಿಸುವರಯ್ಯ
ಅಂತರಂಗಕ್ಕೂ ಕಾವಿ ದೀಕ್ಷೆಬೇಕಯ್ಯ.
ಅಂತರಂಗ ಬಹಿರಂಗ ಒಂದಾಗಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೬

ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳು
ವೀರಶೈವ ಸಂವಿಧಾನದ ಮೂರು ಅಂಗಗಳಯ್ಯ.
ಇವು ಕೇವಲ ಪ್ರಚಾರವಾದರೆ ಮಾತ್ರ ಸಾಲದಯ್ಯ.
ಇವು ಆಚರಣೆಯಲ್ಲಿಯೂ ಬರಬೇಕಯ್ಯ.
ಇದು ಮಠಗಳಿಂದಲೇ ಆಗಬೇಕಯ್ಯ.
ಇಷ್ಟಲಿಂಗ ರಹಸ್ಯ ತಿಳಿಯಬೇಕಯ್ಯ, ತಿಳಿಸಬೇಕಯ್ಯ.
ಲಿಂಗಯೋಗ ತರಬೇತು ಏರ್ಪಡಿಸಬೇಕಯ್ಯ.
ಲಿಂಗಾಯತರು ಇಷ್ಟಲಿಂಗವ ಕೈಬಿಡದಂತಾಗಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೭

ಇಂದು ಹಲವಾರು ಯೋಗಗಳ ಹಾವಳಿ,
ಹಠಯೋಗ, ರಾಜಯೋಗ, ಸಹಜಯೋಗ,
ಸಿದ್ಧಿ ಸಮಾಧಿಯೋಗ ಬಸವ ಸಿದ್ಧಲಿಂಗಯೋಗ,
ಇನ್ನು ಏನೇನೋ ಯೋಗಗಳು
ಬೀದಿಬೀದಿಗೆ ಯೋಗ ಶಾಲೆಗಳಯ್ಯ,
ಲಿಂಗಯೋಗದ ಹೆಸರೇ ಇಲ್ಲವಯ್ಯ.
ಲಿಂಗಧಾರಿಗಳು ಇವುಗಳಿಗೆ ಬಲಿಯಾಗಿರುವರಯ್ಯ.
ಸಹಜ ಸುಲಭ ಶಿವಯೋಗವ ಬಿಟ್ಟು,
ನಾರುಬೇರಿನ ಕುಟಿಲ ಕುಹಕಯೋಗಂಗಳಿಗೆ
ಬಲಿಯಾಗಿರುವರಯ್ಯ.
ಲಿಂಗಯೋಗವ ತಿಳಿಸಿಕೊಡುವ ಗುರುಗಳು ಉದಯವಾಗಲಯ್ಯ.
ಇದ ಆಚರಿಸಿ ತೋರಿಸಿ ಇದನುಳಿಸಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೮

ಕೈಯಲಿ ಅಮೃತವಿರಲು ಹುಳಿ ಮಜ್ಜಿಗೆಗಾಗಿ
ಊರನಲೆಯಬೇಕೆ?

ಕರದಿ ಅಷ್ಟಲಿಂಗವಿರಲು ಗುಡಿಗುಂಡಾರಗಳ ಸುತ್ತಲೇಕೆ?
ಇಷ್ಟಲಿಂಗದ ದೃಷ್ಟಿಯೋಗದಿಂದ
ಸಕಲ ಪಡಿಪದಾರ್ಥಗಳು ಇದರಲಿರಲು
ಅನ್ಯಯೋಗಗಳ ಹಂಗೇಕಯ್ಯ?
ದೃಷ್ಟಿಯೋಗದಿಂದ ಲೌಕಿಕ ಸಮೃದ್ಧಿ,
ದೃಷ್ಟಿಯೋಗದಿಂದ ಆಧ್ಯಾತ್ಮಿಕ ಸಿದ್ಧಿ.
ದೃಷ್ಟಿಯೋಗವೇ ಪರಿಪೂರ್ಣಯೋಗವಯ್ಯ.
ಇದು ಸಾಧಿಸದ ಬಾಳು ವ್ಯರ್ಥವಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೧೯೯

ಮಠದ ಸ್ವಾಮಿಗಳಿಂದು ದ್ರಷ್ಟಾರರಾಗಬೇಕಯ್ಯ,
ಅಧ್ಯಾತ್ಮ ಪ್ರಪಂಚದಾಚಾರ್ಯರಾಗಬೇಕಯ್ಯ.
ಅಧ್ಯಾತ್ಮ ವಿದ್ಯೆಯ ಸಾಕಾರ ಮೂರ್ತಿಗಳಾಗಬೇಕಯ್ಯ.
ಚೈತನ್ಯದ ಚಿಲುಮೆಗಳಾಗಬೇಕಯ್ಯ,
ಸ್ಫೂರ್ತಿಯ ನೆಲೆಗಳಾಗಬೇಕಯ್ಯ,
ಇಪ್ಪತ್ತನೆ ಶತಮಾನ ಮತ್ತೆ ಹನ್ನೆರಡನೆ ಶತಮಾನವಾಗಬೇಕಯ್ಯ,
ಈ ಕನಸು ನನಸಾದೀತೆ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೦

ಹಿಂದೊಮ್ಮೆ ಕಲ್ಯಾಣ ಅಧ್ಯಾತ್ಮದ ತವರೂರು,
ಇಂದು ಅದೊಂದು ಹೇಳ ಹೆಸರಿಲ್ಲದ ಊರು.
ಶರಣರ ಅನುಭಾವಾಮೃತವ ಸವಿದು
ಬರುವರು ಪರದೇಶದವರು ಕಲ್ಯಾಣವ ನೋಡಲು.
ಅದರ ಗತವೈಭವದ ಕನಸು ಕಂಡು ಅದ ನೋಡಬಯಸುವರು.
ಆದರೆ ಅಲ್ಲೇನಿದೆ? ಅಲ್ಲಿ ಸಿಗುವದು ಹಾಳು ಗುಹೆಗಳು,
ಹೀನ ದೆಸೆಯಲ್ಲಿರುವ ಕೆಲವು ಸ್ಮಾರಕಗಳು.
ಕಲ್ಯಾಣ ಕಟುಕರ ಕೇರಿಯಾದರೂ,
ಯಾರ ಲಕ್ಷವೂ ಅತ್ತ ಹರಿಯಲಿಲ್ಲ.
ಇದೇನು ಕಾಲ ಮಹಿಮೆಯೋ?
ನಮ್ಮತನದ ಬಗ್ಗೆ ನಮ್ಮ ಅವಜ್ಞೆಯೋ?

ಮೆರೆಯಲಿ ಕಲ್ಯಾಣ ಮತ್ತೊಮ್ಮೆ ಅರಿವಿನ ಕೇಂದ್ರವಾಗಿ,
ಉದಯವಾಗಲಿ ಅಧ್ಯಾತ್ಮವಿದ್ಯಾಲಯಗಳು ಇಲ್ಲಿ.
ಆಚರಣೆಯಲಿ ಬರಲಿ ಅನುಭಾವ ಮತ್ತೊಮ್ಮೆ ಇಲ್ಲಿ.
ಏಳಿ ಎದ್ದೇಳಿ ಈ ಕನಸ ನನಸಾಗಿಸಲು,
ನೀ ಕೈಹಿಡಿದು ಮುನ್ನಡೆಸೆಮ್ಮನು
ಓ ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೧

ವೀರಶೈವ ಉಳಿಯಬೇಕಾದರೆ ಮಠಗಳೆಲ್ಲ ಒಂದಾಗಬೇಕು.
ಸ್ವಾಮಿಗಳೆಲ್ಲ ಒಂದಾಗಬೇಕು.
ಗುರು ವಿರಕ್ತ ಭೇದಭಾವ ಅಳಿಯಬೇಕು.
ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳು
ಗುರು ವಿರಕ್ತರಿಗೆಲ್ಲ ಒಂದೇ,
ಇಷ್ಟದೈವ, ಪರಶಿವ ಒಂದೇ.
ಅವನ ಕುರುಹು ಇಷ್ಟಲಿಂಗ ಒಂದೇ.
ಯೋಗ ಒಂದೇ ಎಲ್ಲರಿಗೂ, ಶಿವಯೋಗ.
ಗುರು, ಲಿಂಗ, ಜಂಗಮ ಕಾಯಕತತ್ವಗಳು
ಎಲ್ಲರಿಗೂ ಒಂದೇ.
ಎಲ್ಲರಿಗೂ ಗುರುವಿನ ಗುರು ಪರಶಿವ ಒಬ್ಬನೇ.
ಒಂದಾಗಬೇಕೆಲ್ಲರೂ ಈ ಗುರುವಿನಾಶ್ರಯದಲಿ.
ಉಳಿಸಬೇಕು, ಬೆಳೆಸಬೇಕು ವಿಶ್ವಸಂಸ್ಕೃತಿಯ.
ಇದರ ಬೆಳಕಿನಲಿ ಬೆಳಕ ಕಂಡು ಬದುಕುವಂತಾಗಲಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೨

ಬಯಲು ನಿರ್ಬಯಲು, ಸರ್ವಶೂನ್ಯ ನಿರಾವಲಂಬ
ಮಹಾಶೂನ್ಯ, ಶೂನ್ಯದಾಚೆಯು ಶೂನ್ಯ,
ಇವು ಪರಶಿವನ ಪರ್ಯಾಯ ನಾಮಗಳಯ್ಯ.
ಪರತತ್ವವೊಂದೇ ಹೆಸರುಗಳನೇಕ.
ಮುಸ್ಲಿಮರಿಗಿದು ಅಲ್ಲಾ,
ಕ್ರೈಸ್ತರಿಗಿದು ಯಹೋವ,
ವೈಷ್ಣವರಿಗಿದು ವಿಷ್ಣು

ಶಾಕ್ತರಿಗಿದು ಶಕ್ತಿ, ಗಾಣಪತ್ಯರಿಗಿದು ಗಣಪತಿ
ಜೈನರಿಗಿದು ಜಿನ, ಬೌದ್ಧರಿಗಿದು ಬೋಧಿಸತ್ವ.
ಹೋರಾಟವಿಕ್ಕಿಸಲು ಬೇರಾದುದಲ್ಲದೆ
ಮೂಲಸ್ವರೂಪ ಬೇರಾದುದಿಲ್ಲ.
ಈ ಮರ್ಮ ತಿಳಿದರೆ ಸಂಘರ್ಷಗಳಿಲ್ಲ ಮನುಕುಲಕೆ.
ಈ ಅರಿವ ದಯಪಾಲಿಸು, ಮನಕುಲವನುಳಿಸು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೩

ಪರಶಿವನಾಂತರ್ಗತಶಕ್ತಿ ಚಿತ್‌ಶಕ್ತಿ,
ಆದಿಶಕ್ತಿ ಚಿತ್‌ಶಕ್ತಿಯಮಗಳು.
ಆದಿಶಕ್ತಿಯಿಂದ ಜಗತ್‌ಸೃಷ್ಟಿ.
ಇದರಿಂದ ಹೊರಹೊಮ್ಮಿತು ಸಕಲ ಜೀವರಾಶಿ.
ಇದರ ಸಾರಸರ್ವಸ್ವ ಮಾನವಜೀವಿ.
ನಾಮ ರೂಪ ಭೇದಗಳಿಂದ ಮಾನವರು ಬೇರೆ ಬೇರೆ.
ಭೇದಗಳನೇಕವಾದರೂ ಮೂಲವೊಂದೇ.
ನಮ್ಮ ಮೂಲವೊಂದೇ ಎಂದು ವಿಜ್ಞಾನ ಸಾರುತಿದೆ.
ಅನುಭಾವ ತತ್ವಜ್ಞಾನ ಎಂದೋ ಇದನು ಹೇಳಿದೆ.
ವಾಸ್ತವ ದೃಷ್ಟಿ ಬೆಳೆಯಲಿ, ವೈಜ್ಞಾನಿಕ ದೃಷ್ಟಿ ಬೆಳೆಯಲಿ,
ವೈಚಾರಿಕತೆ ಬೆಳೆಯಲಿ, ಮನುಕುಲವೊಂದೇ.
ಈ ಅರಿವು ಮೂಡಲಿ, ಎಲ್ಲರೂ ಹಾಯಾಗಿ ಬಾಳಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೪

ಭಾರತದ ಮೂಲವಾಸಿಗಳು ಯಾರು?
ದ್ರಾವಿಡರೆಂದು ಒಂದು ವಾದ.
ದ್ರಾವಿಡರೂ ಹೊರಗಿನವರೆಂಬುದಿನ್ನೊಂದು ವಾದ.
ಆದಿ ಮಾನವನ ತೊಟ್ಟಿಲು ದಕ್ಷಿಣ ಭಾರತ, ದಕ್ಷಿಣ ಆಫ್ರಿಕಾ,
ಇದು ಜನಾಂಗೀಯ ಶಾಸ್ತ್ರದ ಸಿದ್ಧಾಂತ.
ಆರ್ಯರು, ಹೂಣರು, ಕುಶಾನರು, ಮುಸ್ಲಿಮರು,
ಪಾರ್ಸಿಗಳು, ಆಂಗ್ಲರು, ಯುರೋಪಿಯನರು,
ಬಂದರಿಲ್ಲಿಗೆ ನಂತರ.

ಬಂದವರೆಲ್ಲ ಇಲ್ಲಿಯವರೇ ಆದರು,
ಈ ನೆಲದ ಗುಣವೇ ಹೀಗೆ.
ತೋರುವದೆಲ್ಲರಿಗೆ ಸಮಾನತೆಯ ಹಾದಿ.
ಭಾರತೀಯ ಸಂಸ್ಕೃತಿಯೊಂದು ವಿಶ್ವಸಂಸ್ಕೃತಿ
ಅನೇಕತೆಯಲಿ ಏಕತೆಯೇ ಇದರ ಸೂತ್ರ.
ಇದು ವಿಶ್ವಕೆಲ್ಲ ಮಾದರಿ ಸಂಸ್ಕೃತಿ,
ಇದು ದೀರ್ಘಾಯುವಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೫

ಸಂಸ್ಕಾರವಿಲ್ಲದವರು ಶ್ರೀಮಂತರಾದರೆ;
ಧನ ಪಿತ್ತ ನೆತ್ತಿಗೇರುವದಯ್ಯ.
ಸಂಸ್ಕಾರವಿಲ್ಲದವರಿಗೆ ಅಧಿಕಾರ ಸಿಕ್ಕಲ್ಲಿ
ಅಧಿಕಾರ ಪಿತ್ತ ನೆತ್ತಿಗೇರುವದಯ್ಯ.
ಇವೆರಡೂ ಇಲ್ಲದಾಗ ಅವರು
ನಾಯಿಗಳಂತಾಗುವರಯ್ಯ.
ಸಂಸ್ಕಾರಹೀನರ ಸಹವಾಸಬೇಡ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೬

ಸಂಸ್ಕಾರವೊಂದು ಅಂತರಂಗರತ್ನ.
ಸಂಸ್ಕಾರವೊಂದು ಅಂತರ್‌ಜ್ಯೋತಿ.
ಸಂಸ್ಕಾರವಿಲ್ಲದ ಬಾಳು ಪಶುಬಾಳು
ಸಂಸ್ಕಾರದಿಂದಲೇ ಸಕಲ ಸಂಪದ.
ದೈವಸಂಪದ, ಮುಕ್ತಿಸಂಪದ.
ನನಗೇನೂ ಬೇಡ, ಸಂಸ್ಕಾರವನ್ನು ನೀಡು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೭

ಬಾಳು ನಿಯಮಬದ್ಧ, ಕರಾರುಬದ್ಧ
ಒಂದು ನಿಯಮ ಪರಿಮಿತಿಯಲ್ಲಿ
ಈ ಜೀವನ ಅಸ್ತಿತ್ವ.
ತೊಂಬತ್ತು ಡಿಗ್ರಿ - ತೊಂಬತ್ತೆಂಟು ಡಿಗ್ರಿ

ಉಷ್ಣ ಮಿತಿಯಲಿ ಇದು ಸರಾಗ
ಈ ಮಿತಿಯಲಿ ಏರುಪೇರಾದರೆ
ಕಾದಿರುವುದಿದಕ್ಕೆ ಅನಾಹುತ.
ಜೀವವೊಂದು ಗಾಳಿಯ ಸೊಡರು.
ಜೀವವಿರುವತನಕ ಮಾಡು ಚರಸೇವೆಯ,
ಗುರುಸೇವೆಯ, ಲಿಂಗಸೇವೆಯ,
ಮಾಡುವುದರಿಂದ ನಿನ್ನಬಾಳು ಸುಖಮಯ ಚಿನ್ಮಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೮

ಹೆಣ್ಣು ಪ್ರತ್ಯಕ್ಷ ದೇವತೆ ಎಂದರು ಶರಣರು,
ಸುಸಂಸ್ಕೃತ ಹೆಣ್ಣಿನಿಂದಾಗುವುದು ಬಾಳು ಸ್ವರ್ಗ.
ಸುಶಿಕ್ಷಿತ ಹೆಣ್ಣು ಸುಸಂಸ್ಕೃತಳಾದರೆ
ಹಾಲಿಗೆ ಜೇನು ಸೇರಿದಂತೆ,
ಅಸಂಸ್ಕೃತ ವಿದ್ಯಾವಂತೆಗಿಂತ
ಸುಸಂಸ್ಕೃತ ಅವಿದ್ಯಾವಂತೆಯೇ ಲೇಸು.
ಹೆಣ್ಣು ಸುಶಿಕ್ಷಿತಳಾಗಬೇಕು,
ಸುಸಂಸ್ಕೃತೆಯು ಆಗಬೇಕು.
ಇಂಥ ಶಿಕ್ಷಣ ಇಂದಿನ ಹೆಣ್ಣಿಗೆ ಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೦೯

ಪಿತ್ರಾರ್ಜಿತ ಆಸ್ತಿ ಪರಧನ,
ಸ್ತ್ರೀಧನ ಪರಧನ,
ವರದಕ್ಷಿಣೆ ಪರಧನ,
ಶ್ರಮವಿಲ್ಲದ ಸಂಬಳ ಪರಧನ,
ಮಕ್ಕಳಧನ ಪರಧನ,
ಕಾಯಕದಿಂದ ಬಂದುದು ಮಾತ್ರ ಸ್ವಧನ.
ಸ್ವಧನದಿಂದ ಬಾಳುವ ಬಾಳು ಶರಣಬಾಳು,
ಪರಧನದಿಂದ ಬಾಳುವದು ದಾಸ್ಯಬಾಳು.
ಪರಧನವೊಂದು ವಿಷ,
ಕಾಯಕಧನವದು ಅಮೃತ

ಈ ಅಮೃತವನುಂಡು ಅಮರನಾಗಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೦

ಕಾಲ ಓಡುತಿದೆ, ಅದಾನಾರೂ ತಡೆಯರು,
ಬೆಳಗಾಗುತಿದೆ, ಸಂಜೆಯಾಗುತಿದೆ,
ಜೀವನವೆಲ್ಲ ಕಳೆದು ಹೋಗುತಿದೆ,
ಬಾರದು ಬಾರದು ಕಳೆದ ಸಮಯ ಮತ್ತೆ,
ಅದೊಂದು ಅನರ್ಘ್ಯ ರತ್ನ,
ವ್ಯರ್ಥ ಕಳೆಯಬೇಡದನ್ನು,
ಮಾನವನಿಗಿರುವದು ಒಂದುನೂರು ವರ್ಷ ಮಾತ್ರ.
ಕಾಲದನಂತತೆಯಲಿದೊಂದು ಕಿಂಚಿತ್.
ಮಾಡಬೇಕಾದ ಕೆಲಸಕೆ ಮಿತಿಯಿಲ್ಲವಂತೆ,
ಮಾಡಬೇಕು, ಮಾಡುತ್ತಲೇ ಇರಬೇಕು.
ಮಾಡದವನ ಬಾಳು ಶೂನ್ಯ, ಒಳ್ಳೆಯದನೇ ಮಾಡಬೇಕು.
ಮಾಡಿಯೂ ಮಾಡದಂತಿರಬೇಕು,
ಮಾಡಿದುದನ್ನ ಮರೆಯಬೇಕು,
'ಒಳ್ಳೆಯದನ್ನ ಮಾಡು ಹೊಳೆಗೆ ಹಾಕು' ನೀತಿಯನ್ನನುಸರಿಸಬೇಕು.
ಕಾಲದವಧಿಯ ಮೀರಿ ಕಾಲಾತೀತನಾಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೧

ಮಾಡಿದ್ದುಣ್ಣೋ ಮಾರಾಯ,
ದುಡಿದುದ್ದುಣ್ಣೋ ಮಾರಾಯ,
ದುಡಿದುಣ್ಣುವದಕಿಂತ
ಪಡೆದುಣ್ಣುವದೇ ಅಧಿಕ.
ದುಡಿದೂ ಹಲವರಿಗಿಲ್ಲ ಫಲಪ್ರಾಪ್ತಿ.
ದುಡಿಯದೇ ಮಜಾ ಮಾಡುವರನೇಕ.
ದುಡಿಯಬೇಕು, ಉಣಬೇಕು,
ಇತರರಿಗೂ ಉಣಬಡಿಸಬೇಕು.
ಇದು ದುಡಿಮೆಯ ಮರ್ಮವಯ್ಯ,
ಶರಣಧರ್ಮದ ಸಾರ ಸರ್ವಸ್ವವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೨

ವಿಶ್ವದ ವಿಸ್ತಾರ ಅಗಾಧ
ಕ್ಷಣಾರ್ಧದಲಿ ಚಲಿಸುವದು ಬೆಳಕು
ಸಾವಿರಾರು ಕೋಟಿ ಮೈಲುಗಳಂತರ.
ಬೆಳಕಿಗೆ ಬೇಕು ಇದನಳಿಯಲು,
ಅನಂತಕೋಟಿ ವರ್ಷ.
ಈ ತುದಿಯಲಿಂದಾ ತುದಿಗೆ ಬೆಳಕು
ಮುಟ್ಟಲುಬೇಕು ಲೆಕ್ಕವಿಲ್ಲದಷ್ಟು ವರ್ಷ.
ದೂರದರ್ಶಕ ಯಂತ್ರ ತೋರುವ
ಅತಿದೂರದ ದೃಶ್ಯಗಳು ಭ್ರಾಮಕ,
ಅಲ್ಲಿ ಕಾಣುವ ನಕ್ಷತ್ರಗಳೆಂದೋ ಸಾವನ್ನಪ್ಪಿವೆ.
ಈಗ ನಾವು ನೋಡುವದು ಅವುಗಳ ಗತಕಾಲದ ಛಾಯೆ ಮಾತ್ರ.
ವಿಶ್ವವೊಂದು ಭ್ರಮೆಯೆ?
ಭ್ರಮೆಯಿಲ್ಲದಿದ್ದರೂ ಅದು ತೋರಿಕೆಯ ಸತ್ಯ,
ಇದರ ಮೂಲದಲಿರುವದು ಪರಾತ್ಪರ ಸತ್ಯ.
ಇದನರಿತರೆಲ್ಲವನೂ ಅರಿತಂತೆ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೩

ಹರನೇ ನೀನು ಸನ್ಯಾಸಿಯಲ್ಲ,
ನಿನಗಿಬ್ಬರು ಹೆಂಡಿರು,
ಗಣಸಮೂಹ ನಿನ್ನ ಪರಿವಾರ.
ಈ ವಿಶ್ವವೇ ನಿನ್ನ ಕಾರ್ಯರಂಗ.
ಸಕಲ ಜೀವರಾಶಿಗಳೇ ನಿನ್ನ ಮಕ್ಕಳು.
ಅವರ ಯೋಗಕ್ಷೇಮವೇ ನಿನ್ನ ಕಾಯಕ.
ಸದಾ ನಿನಗಿದೇ ಧ್ಯಾನ.
ಶರಣರಿಗಾಯಿತು ನಿನ್ನ ಈ ಸ್ವರೂಪದರ್ಶನ.
ಸಂಸಾರವೇ ನಿನ್ನನರಿಯಲು ಸಾಧನವೆಂದು ಸಾರಿದರು.
ಸಂಸಾರವೇ ಯೋಗವೆಂದದನ್ನಾಚರಿಸಿ ತೋರಿದರು.
ಸಂಸಾರ ಯೋಗವೇ ನಿಜಯೋಗವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೪

ಸಾಗರವೊಂದು ವಿಚಿತ್ರ ವಿಶ್ವ
ಇದು ಮೇಲಿನ ವಿಶ್ವದ ಪ್ರತಿರೂಪ.
ಇದರಂತರಾಳದಲಿ ಪ್ರಾಣಿಗಳ ಅದ್ಭುತಲೋಕ
ಷಾರ್ಕುಗಳು, ತಿಮಿಂಗಲಗಳು,
ಪ್ರಾಣಿರಾಜ್ಯದ ಬಲಭೀಮರೇನು ಸಾಮಾನ್ಯರೆ?
ಜೊತೆಗಿರುವ ಸಸ್ಯಲೋಕವಂತೂ ಚಿತ್ರವಿಚಿತ್ರ,
ಇದು ವಿರಳ ಖನಿಜಗಳಿಗೊಂದು ಧಾಮ,
ಅನರ್ಘ್ಯ ಮುತ್ತುರತ್ನಗಳಿದರೊಡಲಿನಲಿ,
ಇದರ ಮೇಲೆ ವಾಯುವಿನ ಮಹಾಸಾಗರ,
ಆಕಾಶವೇ ಈ ಸಾಗರಕೆ ಹೊದಿಕೆ,
ಇದರ ನಿಜಸ್ವರೂಪವಿನ್ನೂ ಶೋಧನೆಯಾಚೆಯೇ.
ಇದು ಮಾನವನ ಕಾಮಧೇನು, ಕಲ್ಪವೃಕ್ಷ,
ನಿನ್ನ ಸೃಷ್ಟಿ ಬಹುವಿಚಿತ್ರವಯ್ಯ.
ನೀನು ಒಡೆಯಲಾರದೊಗಟೆಂಬುದಕೆ ಇದೇ ಸಾಕ್ಷಿಯಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೫

ಭೂಮಿಯ ಮೇಲೆ ಆಕಾಶ,
ಮೂರು ಮೈಲುಗಳವರೆಗೆ ಚಾಚಿದೆ ವಾಯು ಸಮುದ್ರವಲ್ಲಿ,
ವಾತಾವರಣದ ಇತರ ಪದರಗಳು ಅದರಾಚೆ,
ಮುಂದೆ ಬಂದು ನಿಲ್ಲುವದು ಬಾಹ್ಯಾಕಾಶ, ಅದರಾಚೆ
ಸಿಗುವದು ನಮಗೆ ಸ್ಥಲಾಕಾಶ (space).
ಗೋಲಾಕಾರದೀ ಬಯಲು ಅನಂತ ಶಕ್ತಿಯ ಆಗರ,
ಸಿಡಿಯುವವು ಶಕ್ತಿಯ ಕಣಗಳು ಇಲ್ಲಿಂದ.
ಮುನ್ನಡೆದರೆ ಏನೂ ಇಲ್ಲದ ಶೂನ್ಯದನುಭವವಯ್ಯ,
ಶೂನ್ಯವೆಂದರೂ ಇದು ಬರಿದಲ್ಲವಯ್ಯ,
ನಿಶ್ಶಬ್ದವೆಂದರೂ ಇದು ಮೌನವಲ್ಲಯ್ಯ,
ಶೂನ್ಯದಾಚೆಯ ಶೂನ್ಯ, ನಿಶ್ಶೂನ್ಯ ಮಹಾಶೂನ್ಯ
ಸೀಮೆಯಿಲ್ಲದ ಶೂನ್ಯ, ಅನಂತ ಶೂನ್ಯ.
ಇದು ಭಾವಗೋಚರಮಾತ್ರ, ಪರತತ್ವ ಭಾವಗೋಚರ
ಅಲ್ಲಲ್ಲ ಇದೇ ಪರತತ್ವ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೬

ಷಟ್‌ಸ್ಥಲಮಾರ್ಗದ ಮೂಲಕ ಅರಿವಿನ ಯಾತ್ರೆ,
ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ,
ಶರಣ, ಐಕ್ಯಸ್ಥಲಗಳು ಅರಿವಿನಾರು ಮೆಟ್ಟಿಲುಗಳು.
ಅಜ್ಞಾನದಿಂದರಿವು ಸಂಕುಚಿತ,
ಮೊಡೆಮೋಡಿಸುವುದು ದೃಷ್ಟಯೋಗವೀತಿಮಿರುವ.
ಸತ್ಯಶುದ್ಧಜೀವನವಿದಕಾಧಾರ.
ಇದರಿಂದಾಗುವುದು ಅರಿವಿನ ಕ್ಷೇತ್ರ ವಿಸ್ತಾರ.
ವಿಸ್ತಾರ, ವಿಸ್ತಾರ, ಅನಂತವಾಗುವದರಿವು ಸಾರಾಸಾರ.
ಅರಿವಿನ ಯಾತ್ರೆ ಮುಕ್ತಾಯವಿಲ್ಲಿ,
ಬಾಳು ಸಫಲತೆಯ ಪಡೆಯುವುದಿಲ್ಲಿ.
ಇದು ಬಾಳಗುರಿಯಾಗಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೭

ರಾಸಾಯನಿಕ ಕ್ರಿಯೆಗಳಿಂದ ಕಾಯಕ್ಕೆ ಚೈತನ್ಯ,
ಮನಕ್ಕೆ ಚೈತನ್ಯ. ಇವುಗಳ ಕ್ರಮಬದ್ಧತೆಯೇ ಆರೋಗ್ಯ.
ಇವು ಏರುಪೇರಾದರೆ ಅನಾರೋಗ್ಯ,
ಕಾಯ ಮನಗಳೆರಡೂ ಅಸ್ತವ್ಯಸ್ಥ.
ಭಾವನೆಗಳ ಮೇಲೆಯೂ ಹಿಡಿತ ಈ ಕ್ರಿಯೆಗಳಿಗೆ.
ಹಾರ್ಮೋನುಗಳು, ಜೀವಸತ್ವಗಳು, ಕಿಣ್ವಗಳು,
ಆಧಾರವೀಕ್ರಿಯೆಗಳಿಗೆ,
ಯೋಗದಿಂದ ಸಾಧ್ಯ ಕಾಯ ನಿಯಂತ್ರಣ,
ಮನಸ್ಸಿನ ನಿಯಂತ್ರಣ,
ಹಿತಕರ ರಾಸಾನಿಯಕರಗಳ ಸೃಷ್ಟಿಯಿದರಿಂದ,
ದೈಹಿಕ ಮಾನಸಿಕಾರೋಗ್ಯಕೆ ಯೋಗವೇ ಮೂಲವಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೮

ಇಷ್ಟಲಿಂಗೋಪಾಸನೆಯಿಂದ ತನುಶುದ್ಧಿ, ಮನಶುದ್ಧಿ,
ಪ್ರಾಣಲಿಂಗೋಪಾಸನೆಯಿಂದ ಪ್ರಾಣಶುದ್ಧಿ,

ಭಾವಲಿಂಗೋಪಾಸನೆಯಿಂದ ಭಾವಶುದ್ಧಿ.
ತನುಶುದ್ಧಿ ಮನಶುದ್ಧಿ ಪ್ರಾಣಶುದ್ಧಿ ಭಾವಶುದ್ಧಿ
ಇದೇ ಪರಿಪಕ್ವತೆ, ಇದೇ ಪರಿಪೂರ್ಣತೆ,
ಇದೇ ಪರತತ್ವವಾಗುವ ಪರಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೧೯

ಎಲೆ ಮನವೆ, ನಿನಗೊಂದು ಕಿವಿಮಾತ ಹೇಳುವೆ,
ನೀನೊಂದು ಮರ್ಕಟವಂತೆ,
ನಿನ್ನ ಸ್ವಭಾವ ಬಹಳ ಚಂಚಲವಂತೆ.
ನೀನೊಂದು ದುರ್ವ್ಯಸನಗಳ ಗೂಡು.
ಶರಣರ ವಚನಗಳನ್ನೋದು.
ಮನನ ಚಿಂತನ ಮಾಡು,
ಆಚರಣೆಯ ಸಾಗರದಲೀಜಾಡು,
ಆಗಾಗುವೆ ನೀನು ಅಧ್ಯಾತ್ಮದ ಜೇನುಗೂಡು.
ನೆಲಸುವದಾಗ ನಿನ್ನಲ್ಲಿ ಮಹಾಲಿಂಗ.
ಕೊನೆಗೆ ಎಲೆ ಮನವೆ, ನೀನಾಗುವೆ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೦

ಒಂದೂರಿಗನೇಕ ದಾರಿಗಳು,
ಆರಿಸಿಕೊಂಡ ದಾರಿಯಲ್ಲೇ ನಡೆಯಬೇಕು,
ಊರ ಸೇರಬೇಕು.
ದಾರಿ ಬದಲಾಯಿಸಬೇಡ,
ಬದಲಾಯಿಸುತ್ತಲೇ ಹೋದರೆ
ಊರು ಸೇರುವದು ಯಾವಾಗ?
ಅದು ನನಸಾಗದೆ ಕನಸಾದೀತು, ಜೋಕೆ.
ಸತ್ಯಾನ್ವೇಷಣೆಗೆ ಅನೇಕ ಪಥಗಳು.
ಸುಲಭ ಸರಳ ಪಥದಲ್ಲಿ ನಡೆ.
ಛಲಬಿಡದೆ ನಡೆಯಲಿ ಸತ್ಯಾನ್ವೇಷಣೆ.
ಮಾರ್ಗದರ್ಶಕರಾರಾದಡೇನು?
ಅವರಿಂದ ಜ್ಞಾನಪಡೆ
ಬೆಳಕಿನಡೆ ಮುನ್ನಡೆ,

ಬದಲಾಯಿಸದಿರು ಮಾರ್ಗವ
ಗುರಿಮುಟ್ಟದನ್ನಕ್ಕರ,
ಸತ್ಯದರ್ಶನವಾಗುವನ್ನಕ್ಕರ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೧

ಕಾಗದಕ್ಕೆ ಉರಿಹಚ್ಚಿದರೆ
ಉರಿದು ಇಲ್ಲವಾಗುತ್ತದೆ.
ಕಾಗದ ಇಲ್ಲವಾಗಿಲ್ಲ, ನಾಶವಾಗಿಲ್ಲ,
ರೂಪಾಂತರ ಹೊಂದಿತಷ್ಟೆ,
ಅದು ವಿಷವಾಯು ನೀರಿನ ರೂಪತಾಳಿತಷ್ಟೆ.
ಯಾವುದು ನಶ್ವರವಲ್ಲ ಇಲ್ಲಿ.
ಸಾವು ಜೀವನದ ಇನ್ನೊಂದು ಮುಖ.
ಸಾವು ರೂಪ ಬದಲಾಯಿಸುತ್ತದೆ,
ಬೇರೊಂದು ರೂಪ ಕೊಡುತ್ತದೆ.
ಆತ್ಮ ಅವಿನಾಶಿ - ಅದಕ್ಕೆ ಸಾವಿಲ್ಲ.
ರೂಪಾಂತರ ಹೊಂದುವದೂ ಇಲ್ಲ.
ದೇಹವೊಂದರಿಂದದರ ನಿರ್ಗಮನ
ಇನ್ನೊಂದು ದೇಹದಲ್ಲಿದರ ಬಂಧನ.
ಶಿವಧ್ಯಾನ, ಶಿವಜ್ಞಾನದಿಂದ ಬಂಧನದಿಂದಿದಕೆ ಬಿಡುಗಡೆ,
ಇದಾಗುವದಾಗ ಅಮರ,
ಇದಾಗುವದಾಗ ಪರಮಾತ್ಮ, ಆಗುವದದು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೨

ಆಧ್ಯಾತ್ಮ ಕನ್ಯೆಯೊಂದಿಗೆ ಸರಸಾಟ
ದಿವ್ಯಾನಂದದ ರಸದೂಟ, ನಿತ್ಯಾನಂದದ ರಸದೂಟ.
ತಪ್ಪುವದು ಭಾವಬಂಧನ ಭಾವಪಾಶ,
ಇದರಿಂದಾತ್ಮವಾಗುವನು ಸತ್‌ಚಿತ್ ಆನಂದ.
ಲೀನವಾಗುವನು ಅನಂತತೆಯ ಸಾಗರದಿ.
ಈ ಪಥದಲಿ ನಡೆಯಬೇಕಯ್ಯ
ತಾನುತಾನಾಗಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೩

ಅಂತರಂಗದ ಅರಿವೇ ಗುರು.
ಬ.ಯಲೇ ಲಿಂಗ.
ಸಕಲ ಚೇತನವೇ ಜಂಗಮ.
ಮನವೇ ಭಕ್ತ.
ಕೈಕೊಂಡ ಕೆಲಸವೇ ಕಾಯಕ.
ನಿಸ್ವಾರ್ಥ ಸೇವೆಯೇ ದಾಸೋಹ.
ಉರಿಬರಲಿ, ಸಿರಿಬರಲಿ
ಬಂದುದನನುಭವಿಸುವದೇ ಪ್ರಸಾದ.
ಮರಣವೇ ಮಹಾನವಮಿ.
ಅದುಕಾರಣ ನಾನಿನ್ನ ಹಂಗಿನವನಲ್ಲ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೪

ಕೆಲಸದಲಿ ತಲ್ಲೀನವಾದಾಗ ಕಾಲ ಕುಗ್ಗುತ್ತದೆ.
ಕೆಲಸವಿಲ್ಲದಾಗ ಕಾಲ ಹಿಗ್ಗುತ್ತದೆ.
ಪ್ರೇಮಿಗಳ ಮಿಲನದಲಿ ಯುಗಗಳು ಕ್ಷಣಗಳೇ,
ಕಾದ ಹಂಚಿನ ಮೇಲೆ ಕೈಯಿಟ್ಟಾಗ ಕ್ಷಣವೂ ಯುಗವೇ
ಕಾಲಸಾಕ್ಷೇಪ, ಇದು ಸಾಪೇಕ್ಷವಾದ.
ಸ್ಥಲಕಾಲಗಳ ಐನ್‌ಸ್ಟೈನ್‌ವಾದ.
ಕಾಯಕದಲಿ ನಿರತನಾಗಿ ವರ್ಷಗಳನು
ಕ್ಷಣಗಳಂತೆ ಕಳೆಯುವದೇ ಲೇಸು.
ಸೋಮಾರಿಯಾಗಿ ಕಾಲಬಂಧನದಿ ಸಿಲುಕದಿರುವದೇ ಲೇಸು.
ಇದು ಸಾಪೇಕ್ಷ ಸಿದ್ಧಾಂತ ಕಲಿಸುವ ಪಾಠ
ಬಾಳಮಣಿಹವ ಪೂರೈಸುವ ಪಾಠ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೫

ಹಾಸಿಗೆಯಿದ್ದಷ್ಟು ಕಾಲು ಚಾಚು.
ಸಂಪಾದನೆ ನೋಡಿ ಖರ್ಚು ಮಾಡು.
ಗಳಿಸು, ಉಳಿಸು, ಉಳಿಸಿದ್ದನ್ನು
ದಾಸೋಹ ಮಾಡು, ದುಂದುವೆಚ್ಚ ಬೇಡ.

ಸಾಲ ಮಾಡುವದೂ ಬೇಡ, ಸಾಲವೊಂದು ಶೂಲವಲ್ಲವೆ?
ದುಂದುವೆಚ್ಚ ದುರ್ಗುಣಕ್ಕೆ ದಾರಿ,
ಭ್ರಷ್ಟಾಚಾರಕೆ ದಾರಿ, ಯಾಚನೆ, ಕಳವಿಗೆ ದಾರಿ.
ಮಿತವ್ಯಯ, ಮಿತಸಂತಾನ, ಹಿತಮಿತವಾದ
ಜೀವನ ಸ್ವರ್ಗಸುಖಕ್ಕೆ ಸೋಪಾನ,
ಜೀವನ ಸಫಲತೆಗೆ ಸೋಪಾನ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೬

ಆಫ್ರಿಕಾದ ಕರಿಯರು ಅಮೆರಿಕದ ನಾಗರಿಕರು,
ಆಫ್ರಿಕನ್ ಅಮೆರಿಕನ್ನರಿವರು.
ಇದ್ದಲಿಗಿಂತಲೂ ಕಪ್ಪು ಇವರ ಬಣ್ಣ.
ಬಿಳಿಯರ ಬಣ್ಣ ಮಲ್ಲಿಗೆಗಿಂತಲೂ ಬಿಳುಪು,
ಇವರಿಗಿಲ್ಲ ಇನ್ನು ಪರಸ್ಪರ ತಳಕು.
ಇಬ್ಬರಿಗೂ ಸರಿಸಮಾನ ಹಕ್ಕು ಸಂವಿಧಾನದಲ್ಲಿ,
ಅದರಿದಿನ್ನೂ ಬರಬೇಕು ಆಚರಣೆಯಲ್ಲಿ,
ರಾಜಕೀಯದಲ್ಲಿ, ಸಾಹಿತ್ಯದಲ್ಲಿ, ಕಲೆಯಲ್ಲಿ,
ಮಾತುಗಾರಿಕೆಯಲ್ಲಿ, ಆಟೋಟಗಳಲ್ಲಿ,
ಚತುರತೆಯಲ್ಲಿ, ಇವರು ಸರಿಸಮಾನ ಬಿಳಿಯರಿಗೆ.
ಚರ್ಮ ಕಪ್ಪಾದರೂ ಬುದ್ಧಿ ಚುರುಕು.
"ನಾವೆಲ್ಲ ದೇವರ ಮಕ್ಕಳು".
ಇದು ಆಚರಣೆಯಲ್ಲಿ ಬರಬೇಕು.
ಕೆಳಗಿನವರನ್ನು ಮೇಲೆತ್ತಿ ಹಿಡಿಯಬೇಕು.
ಬಸವನ ಮಣಿಹ ಪೂರ್ಣವಾಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೭

ಪರಶಿವನ ಪಂಚಮುಖಗಳು
ಪಂಚಶಕ್ತಿಗಳಯ್ಯ,
ಸೃಷ್ಟಿಗಿವು ಮೂಲಾಧಾರವಯ್ಯ,
ಮಹಾಬಲ, ದುರ್ಬಲ ಬೀಜಶಕ್ತಿ,
ಸಬಲಬೀಜಶಕ್ತಿ, ವಿದ್ಯುತ್ ಅಯಸ್ಕಾಂತಶಕ್ತಿ,
ಗುರುತ್ವಾಕರ್ಷಣ ಶಕ್ತಿ ಇವು ಸೃಷ್ಟಿಗೆ ಕಾರಣವಯ್ಯ.

ಇವು ಇಂದಿನ ವಿಜ್ಞಾನದ ಆವಿಷ್ಕಾರಗಳಯ್ಯ.
ಇವು ಪರಶಿವನ ಪಂಚಶಕ್ತಿಗಳಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೮

ಬಾಯಿ ಮಾತಿನ ಅದ್ವೈತ ಮಹಾಪತಕ,
ಅದನು ಸಾಧಿಸಿ ತೋರಿಸಬೇಕಯ್ಯ.
ಬಾಹ್ಯದೊಳದ್ವೈತವ ಬಳಸಬಾರದಯ್ಯ.
ದೇಹವಿರುವನಕ ದ್ವೈತಭಾವ ಉಳಿಯಬೇಕಯ್ಯ.
ಈ ಸಂಚವನರಿತು ನಡೆಯಬೇಕಯ್ಯ.
ಭಕ್ತಿಯನಾಚರಿಸಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೨೯

ತತ್ವಜ್ಞಾನದ ಪಾರಿಭಾಷಿಕ ಪದಗಳೊಂದು
ಚಕ್ರವ್ಯೂಹವಯ್ಯ.
ಅದ ಭೇದಿಸುವ ಜಂಜಡ ಬೇಡವಯ್ಯ.
ನುಡಿದಂತೆ ನಡೆ ಈ ಜನ್ಮ ಕಡೆ
ಇದ ಮಾಡಬೇಕಯ್ಯ.
ಇದು ಶರಣಪಥವಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೩೦

ಸತ್ಯಗಳನ್ನರಿಯಲನೇಕ ಮಾರ್ಗಗಳಯ್ಯ.
ಇವುಗಳಲಾವುದು ಕಿರಿದು, ಯಾವುದು ಹಿರಿದು?
ಈ ವಾದ ಟಗರ ಹೋರಾಟವಯ್ಯ.
ಹಲರು ಮಾತುಗಳಿಗಿಂತ ಕೃತಿ ಲೇಸಯ್ಯ
ಪರಿಶುದ್ಧ ನುಡಿ, ಪರಿಶುದ್ಧ ನಡೆ, ಪರಿಶುದ್ಧ ಜೀವನ,
ಸಕಲ ಜೀವಿಗಳಲ್ಲಿ ಪ್ರೇಮಭಾವ,
ಇವು ಗುರಿಮುಟ್ಟುವ ನೇರ ಮಾರ್ಗಗಳಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೩೧

ಸೃಷ್ಟಿಲೀಲೆಗಾಗಿ ಒಂದೇ ತತ್ವ ಎರಡಾಯಿತಯ್ಯ,
ಹೆಣ್ಣು ಗಂಡೆಂಬ ರೂಪ ತಾಳಿತಯ್ಯ.
ಇವುಗಳಲಿ ಭೇದಭಾವ ಅಜ್ಞಾನವಯ್ಯ,
ಈ ಮರ್ಮವನರಿತು ಆಚರಿಸಬೇಕಯ್ಯ,
ಶರಣರಿದನಾಚರಿಸಿ ದಾರಿ ತೋರಿದರಯ್ಯ.
“ನಾಮದಲಿ ಹೆಂಗಸಾದಡೇನು?
ಭಾವಿಸಲು ಗಂಡುರೂಪು”
ಈ ರೂಪವಳಿದು ತತ್ವವುಳಿಯಬೇಕಯ್ಯ,
ಇಷ್ಟಲಿಂಗರೂಪಿ ತಂಪೆಯ ವಿರೂಪಾಕ್ಷೇಶ್ವರ.

೨೩೨

ಸಂಸ್ಕೃತಿ ಬಾಳ ಜೀವಾಳವಯ್ಯ,
ನಾವೀಗ ಒಂದುನೂರುಕೋಟಿ,
ಎಲ್ಲರೂ ಅಕ್ಷರಸ್ಥರಾಗಬೇಕಯ್ಯ,
ಸುಶಿಕ್ಷಿತರಾಗಬೇಕಯ್ಯ,
ಸುಸಂಸ್ಕೃತರಾಗಬೇಕಯ್ಯ.
ಎಲ್ಲರೂ ಕಾಯಕ ನಿರತರಾಗಬೇಕಯ್ಯ,
ಇದಕೆ ಸರಕಾರದ ಹಂಗೇಕಯ್ಯ.
ಯಾವ ಕಾಯಕವೇ ಆಗಲಿ ಸ್ವಕಾಯಕವ
ಮಾಡಬೇಕಯ್ಯ.
ಇಹಪರವ ಸಾಧಿಸಬೇಕಯ್ಯ,
ಇದೇ ನಿಜವಾದ ಸಂಸ್ಕೃತಿಯಯ್ಯ,
ಇಷ್ಟಲಿಂಗರೂಪಿ ತಂಪೆಯ ವಿರೂಪಾಕ್ಷೇಶ್ವರ.

೨೩೩

ನೆಲ, ನೀರು, ಬೆಂಕಿ, ಗಾಳಿ, ಮುಗಿಲು
ಇವು ಸೃಷ್ಟಿಯ ಮೂಲಾಂಶಗಳಯ್ಯ,
ಇದು ತತ್ವಜ್ಞಾನ ಹೇಳುವ ಮಾತಯ್ಯ,
ಇವೇ ಪಂಚಲಿಂಗಗಳಯ್ಯ.
ಪಂಚದೈವಗಳಯ್ಯ.
ಶಿವದೇಹದ ಅಂಗಾಂಗಗಳಯ್ಯ.

ಸೃಷ್ಟಿರಚನೆ ಇವುಗಳಿಂದಲೇ ಅಯ್ಯ,
ವಿಜ್ಞಾನವೇನು ಕಂಡು ಹಿಡಿದರೂ
ಇದನಲ್ಲಗಳೆಯದಾಯಿತಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬.೪

ಹೈಡ್ರೋಜನ್‌ನಿಂದ ಯುರೇನಿಯಮ್‌ವರೆಗೂ,
ತೊಂಬತ್ತೆರಡು ಮೂಲಾಂಶಗಳಯ್ಯ.
ಇವುಗಳಿಂದಲೇ ವಸ್ತುಗಳ ರಚನೆಯಯ್ಯ,
ಪಂಚಭೂತಗಳಲ್ಲಿ ಇವು ಅಡಕವಯ್ಯ.
ವಿಜ್ಞಾನ ಶೋಧನೆ ರೀತಿ ಬೇರಾದರೇನು?
ಸತ್ಯ ಒಂದೇ, ಹೆಸರು ಮಾತ್ರ ಬೇರೆ ಬೇರೆಯಯ್ಯ.
ವಸ್ತು ಒಂದೇ, ಹೆಸರು ಬೇರೆ ಬೇರೆ ತತ್ವಗಳಿಗೆ,
ಬೇರೆ ಬೇರೆ ಬಾಷೆಗಳಲ್ಲಿ.
ಜನಕೋಟಿಯ ಬಾಳಲಿ ಧ್ರುವತಾರೆಯಯ್ಯ,
ಸತ್ಯವೊಂದೇ, ಸತ್ಯವನರಿಯಬೇಕಯ್ಯ,
ಅದನರಿಬೇಕಯ್ಯ ಆರಾಧಿಸಬೇಕಯ್ಯ.
ಪರಿಪಾಲಿಸಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬.೫

ನಡುವೆ ಭೂಮಿ ಮೇಲೇಳು ಲೋಕಗಳು,
ಅಲ್ಲಿ ದೇವತೆಗಳವಾಸವಂತೆ.
ಕೆಳಗೇಳು ಲೋಕಗಳು, ಅಲ್ಲಿ ರಾಕ್ಷಸರಿರುವರಂತೆ,
ಇದು ಪುರಾಣದ ಕಂತೆಯಂತೆ,
ಇರುವುದೊಂದೇ ಲೋಕ, ಅದು ಭೂಲೋಕ.
ಇದೊಂದು ಅದ್ವಿತೀಯ ಗ್ರಹಲೋಕ.
ಇದೇ ಜೀವರಾಶಿಗಳ ತವರೂರು.
ಇದಬಿಟ್ಟು ಲೆಕ್ಕವಿಲ್ಲದಷ್ಟು ಗ್ರಹಗಳು ಬ್ರಹ್ಮಾಂಡದಲ್ಲಿ,
ಜೀವವಿದೆಯೇ ಅವುಗಳಲ್ಲಿ?
ಬೇರೆ ರೀತಿ ಜೀವಿಗಳಿರುವಂತೆ ಕೆಲವೊಂದರಲ್ಲಿ!
ಇದಿನ್ನೂ ಅಂತೆಕಂತೆಯಾಗಿಯೇ ಉಳಿದಿದೆಯಂತೆ,

ಆಕಾಶದ ನಿರಂತರ ಶೋಧನೆ ನಡೆಯಲಿ.
ವಿಶ್ವದ ಸ್ವರೂಪ ಬಯಲಾಗಲಿ,
ನಿನ್ನ ಮಹಿಮೆ ಪ್ರಕಟವಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೩೬

ಮಹಾಸಾದಾಖ್ಯ, ಶಿವಸಾದಾಖ್ಯ,
ಅಮೂರ್ತಸಾದಾಖ್ಯ, ಮೂರ್ತಸಾದಾಖ್ಯ,
ಕರ್ತೃ ಸಾದಾಖ್ಯ, ಕರ್ಮ ಸಾದಾಖ್ಯ,
ಇವು ಸೃಷ್ಟಿರಚನೆಯ ಮೂಲತತ್ವಗಳಯ್ಯ.
ವೀರಶೈವ ಸಿದ್ಧಾಂತ ಕೊಟ್ಟ ಹೆಸರುಗಳಯ್ಯ.
ಇವು ಇದರ ಆರು ಬ್ರಹ್ಮಗಳಯ್ಯ.
ಮಹಾಸಾದಾಖ್ಯ ಮೂಲ ಬ್ರಹ್ಮವಯ್ಯ.
ಶಿವಸಾದಾಖ್ಯ ವಿಜ್ಞಾನ ಬ್ರಹ್ಮವಯ್ಯ.
ಇಂದಿನ ವಿಜ್ಞಾನ ಬ್ರಹ್ಮಕ್ಕಿದೇ ಮೂಲವಯ್ಯ.
ಸೃಷ್ಟಿಯ ಆಗು ಹೋಗುಗಳಿಗಿದೇ ಆಧಾರವಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೩೭

ಯೋಗವೊಂದು ವಿಜ್ಞಾನವಯ್ಯ
ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ,
ನಾಗ, ಕೂರ್ಮ, ಕೃಕರ, ದೇವದತ್ತ,
ಧನಂಜಯ ಇವು ದೇಹಸ್ಥ ದಶವಾಯುಗಳಯ್ಯ.
ಯೋಗವಿಜ್ಞಾನದ ಸೂತ್ರಗಳಯ್ಯ.
ದೇಹ ವ್ಯಾಪಾರಗಳಿಗಿವು ಮೂಲವಯ್ಯ.
ಇದರ ರಾಸಾಯನಿಕ ಕ್ರಿಯೆಗಳಿವು ಮೂಲವಯ್ಯ.
ಕ್ರಿಯೆಗಳ ಸಂಖ್ಯೆ ಇಪ್ಪತ್ತು ನಾಲ್ಕಯ್ಯ.
ಇವು ಜೀವ ರಾಸಾಯನಿಕ ವಿಜ್ಞಾನದ ಗೊತ್ತಯ್ಯ.
ಜೀವ ವ್ಯಾಪಾರಗಳ ಹೆಸರು ಬೇರೆ,
ತತ್ವ ಒಂದೇ ಅಯ್ಯ, ಇಷ್ಟಲಿಂಗರೂಪಿ ಹಂಪೆಯ
ವಿರೂಪಾಕ್ಷೇಶ್ವರ.

೨೩೮

ಬ್ರಹ್ಮರಂಧ್ರದ ಬಳಿ ಆಜ್ಞಾ ಚಕ್ರವಯ್ಯ,
ಬ್ರಹ್ಮರಂಧ್ರವೇ ಕೈಲಾಸವಯ್ಯ,
ಇದು ಶಿವನ ವಾಸಸ್ಥಾನವಯ್ಯ.
ಇದು ವಿಶ್ವಶಕ್ತಿಗಳ ಆಗರವಯ್ಯ.
ಇದು ವಿಶ್ವ ಜ್ಞಾನದ ಆಗರವಯ್ಯ.
ಇದು ಜಾಗೃತವಾಗಬೇಕಯ್ಯ.
ವಿಶ್ವಜ್ಞಾನ ಪ್ರಾಪ್ತವಾಗಬೇಕಯ್ಯ.
ವಿಶ್ವಶಕ್ತಿ ಸ್ವಾದೀನವಾಗಬೇಕಯ್ಯ,
ವಿಶ್ವಜ್ಯೋತಿಯ ಕಾಣಬೇಕಯ್ಯ,
ದೃಷ್ಟಿಯೋಗದಿಂದದು ಸಾಧ್ಯವಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೩೯

ವಿಶ್ವದ ಅಣು ಪರಮಾಣುಗಳ ಸಂಖ್ಯೆ
ಗಣಿಸುವರಾರು? ದೇಹದ ಜೀವಕೋಶಗಳ
ಸಂಖ್ಯೆ ಗಣಿಸುವರಾರು?
ಗಗನದ ನಕ್ಷತ್ರಗಳ ಸಂಖ್ಯೆ ಗಣಿಸುವರಾರು?
ಕಾಲದ ನಿರಂತರತೆಯ ಅಳೆಯುವರಾರು?
ಸ್ಥಲದ ಅನಂತತೆಯ ಊಹಿಸುವರಾರು?
ಅನಂತತೆಯೇ ನಿನ್ನ ಲಕ್ಷಣವಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೦

ವಿಶ್ವಚಕ್ರ ತಿರುಗುತಲೇ ಇದೆ,
ಕಾಲಚಕ್ರ ತಿರುಗುತಲೇ ಇದೆ.
ಜೀವಚಕ್ರ ತಿರುಗುತಲೇ ಇದೆ.
ಮನ ಶಿವನಲ್ಲಿ ಸೇರಬೇಕು,
ತಿರುಗುವ ಚಕ್ರ ನಿಲ್ಲಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೧

ಶರಣರ ವಚನಗಳು ಅಪೌರುಷೇಯ,
ಮನ ಶಿವನಾದಾಗ ಉಕ್ಕಿಬಂದ ಅಮೃತ ಪ್ರವಾಹ.
ಅವು ಶಿವನೇ ಹೇಳಿದ ಮಾತುಗಳು.
ಶರಣರ ನುಡಿಯ ಆಲಿಸು, ಪಾಲಿಸು
ಶಿವನುಡಿಯ ಆಲಿಸು, ಪಾಲಿಸು
ನೀನೇ ಶಿವನಾಗುವದು ಸಾಧಿಸು, ಸಾಧಿಸು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೨

ನನಗೆ ನಾನೇ ಶತ್ರುವಯ್ಯ.
ನನಗೆ ನಾನೇ ಮಿತ್ರನಯ್ಯ.
ಅರಿಷಡ್ವರ್ಗಗಳಧೀನ,
ನಮ್ಮ ಬಾಳಿಗಿದು ಊನ.
ಅರಿಷಡ್ವರ್ಗಗಳು ನಮಗಧೀನ,
ನಾವಾಗುವೆವಾಗ ಶಿವನ ವಾಹನ.
ಒಂದನ್ನು ಬಿಡು, ಮತ್ತೊಂದನ್ನ ಹಿಡಿ
ಸತ್ಯಮಾರ್ಗದಲ್ಲಿ ನಡೆ,
ನಿತ್ಯತ್ವವ ನೀ ಪಡೆ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೩

ವಿಭೂತಿ ಶಿವಜ್ಞಾನದ ಬೆಳಗು.
ರುದ್ರಾಕ್ಷಿ ಶಿವಜ್ಞಾನ ದೃಷ್ಟಿ,
ಶಿವಜ್ಞಾನನೇತ್ರ ಧರಿಸಬೇಕಯ್ಯ,
ಶಿವ ಬೆಳಗ ನೋಡಬೇಕಯ್ಯ.
ಲೌಕಿಕ ಪಾರಮಾರ್ಥ ಸಾರ್ಥಕವಾಗಬೇಕಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೪

ಪಾದೋದಕ ನೀರಲ್ಲ, ಅದು ಶಿವಜಲ,
ಬ್ರಹ್ಮರಂಧ್ರ ಶಿವನ ವಾಸಸ್ಥಾನ.

ಹರಿದು ಬರುವದಲ್ಲಿಂದ ಚಿದ್ರಸ.
ಗುರುಪಾದೋದಕದಲ್ಲದು ಸಂಗ್ರಹ.
ಜಂಗಮ ಪಾದೋದಕವಲ್ಲದು ಸಂಗ್ರಹ.
ಲಿಂಗಪಾದೋದಕದಲ್ಲದು ಸಂಗ್ರಹ.
ಇವುಗಳ ಸ್ವೀಕಾರ, ದೂರ ಕಾಯ ವಿಕಾರ,
ದೂರ ಮನವಿಕಾರ,
ಕಾಯಸಿದ್ಧಿ, ವಾಕ್‌ಸಿದ್ಧಿ, ಮನಸಿದ್ಧಿ,
ಅಧ್ಯಾತ್ಮಸಿದ್ಧಿ ಸನ್ನಿಹಿತವಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೫

ರಾಜರ ಏಳುಬೀಳುಗಳ ಕಥೆಯೇ ಇತಿಹಾಸವಲ್ಲ,
ಇದೇ ಚರಿತ್ರೆಯಲ್ಲ.
ಮಾನವಕುಲದ ಸಾಹಸ ಚರಿತ್ರೆ
ಇದು ನಿಜವಾದ ಇತಿಹಾಸ.
ಸಾಂಸ್ಕೃತಿಕ ಇತಿಹಾಸ,
ಧರ್ಮಗಳ ಇತಿಹಾಸ,
ಸಾಹಿತ್ಯಿಕ ಇತಿಹಾಸ ನಿಜವಾದ ಇತಿಹಾಸ.
ಹಿಂತಿರುಗಿ ನೋಡಿದರೆ ಮನುಕುಲದ
ಬೆಳವಣಿಗೆ ಗೋಚರವಾಗಬೇಕು,
ಜೀವನಗ ಸಮಗ್ರತೆ ನೋಡ ಸಿಗಬೇಕು.
ಮುಂದಿನ ಪೀಳಿಗೆಗಿದು ಜೀವನ ರಸಾಯನವಾಗಬೇಕು.
ಪ್ರೇರಣೆಯ ಚಿಲುಮೆಯಾಗಬೇಕು.
ಇತಿಹಾಸವೀ ರೀತಿ ಪುನರ್ರಚನೆಯಾಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೬

ಹಿಮಾಲಯದ ಎತ್ತರ, ಪ್ಯಾಸಿಫಿಕ್ ಮಹಾಸಾಗರದಾಳ,
ಎರಡೂ ಸಮ ಸಮ, ಎತ್ತರ ಆಳ ಎರಡೂ ಒಂಬತ್ತು ಕಿಲೋ ಮೀ.ಗಳು
ಹಿಮಾಲಯದ ಎತ್ತರಕ್ಕೇರಿದವರು
ಬಾಳಸಾಗರದ ಆಳಕ್ಕಿಳಿಯಬೇಕು,
ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿಯಬೇಕು.

ಏರಿದವರು ಎಲ್ಲರ ಸೇವಕರಾಗಬೇಕು
ಬಾಳು ಹಸನಮಾಡಲು ಶ್ರಮಿಸಬೇಕು.
ಏರಿದ ಸೂರ್ಯನಿಂದೀಪಾಠ ಕಲಿಯಬೇಕು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೭

ಸುಖದುಃಖಗಳ ಸಮನಾಗಿ ಸ್ವೀಕರಿಸುವದೇ ಸಮತೆ.
ಹೆಣ್ಣು ಗಂಡುಗಳಲ್ಲಿ ಭೇದ ಮಾಡದಿರುವದೇ ಸಮತೆ.
ಹುಟ್ಟಿದ ಮಕ್ಕಳಲಿ ಭೇದ ಮಾಡದಿರುವದೇ ಸಮತೆ.
ಮಗಳು ಸೊಸೆಯಲ್ಲಿ ಭೇದ ಮಾಡದಿರುವದೇ ಸಮತೆ.
ಜ್ಞಾನಿ ಅಜ್ಞಾನಿಗಳ ಪ್ರೇಮದಿ ಕಾಣುವದೇ ಸಮತೆ.
ಕೀಳುಮೇಲುಗಳನ್ನೆಣಿಸದಿರುವದೇ ಸಮತೆ.
ಧರ್ಮಧರ್ಮಗಳಲಿ ಭೇದ ಮಾಡದಿರುವದೇ ಸಮತೆ
ಭಾಷೆ ಭಾಷೆಗಳಲಿ ಭೇದ ಮಾಡದಿರುವದೇ ಸಮತೆ
ಬಾಳ ಸುಖದ ಮೂಲ ಸೂತ್ರವೇ ಸಮತೆ,
ಸಮತೆಯನಾಚರಿಸು ಇಹಪರದ ಸಾರ್ಥಕತೆಯ ಸಾಧಿಸು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೪೮

ತನ್ನ ಕಾಯಕದ ತನ್ಮಯತೆಯೇ ತಪಸ್ಸು.
ಮಂತ್ರಿ ಕಾಯಕ ತನ್ಮಯತೆಯೇ ತಪಸ್ಸು,
ಅಧಿಕಾರಿ ಕಾಯಕದ ತನ್ಮಯತೆಯೇ ತಪಸ್ಸು.
ಸಾಹಿತ್ಯ ರಚನೆಯ ತನ್ಮಯತೆಯೇ ತಪಸ್ಸು.
ಸಂಗೀತ ಕಲೆಯಲಿ ತನ್ಮಯತೆಯೇ ತಪಸ್ಸು
ಕೃಷಿಕಾಯಕದ ತನ್ಮಯತೆಯೇ ತಪಸ್ಸು
ಬಡಗಿ ಕಾಯಕ ತನ್ಮಯತೆಯೇ ತಪಸ್ಸು.
ಮೆಟ್ಟು ಹೊಲಿಯುವದರಲಿ ತನ್ಮಯತೆಯೇ ತಪಸ್ಸು
ಕಾಯಕವೊಂದು ಶಿವ ವ್ಯವಹಾರ,
ಇದರ ತನ್ಮಯತೆಯೇ ತಪಸ್ಸು
ಬಾಳೊಂದು ಕಾಯಕ ತಪಸ್ಸಾಗಬೇಕಯ್ಯ
ಮುಕ್ತಿಧಾಮವ ಸೇರಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬೯

ಅನುಭಾವಿಯಾದರೆ ಅಲ್ಲಮನಂತಾಗಬೇಕು.
ವಿಶ್ವಬಂಧುವಾದರೆ ಬಸವಣ್ಣನಂತಾಗಬೇಕು.
ಕಾಯಕಯೋಗಿಯಾದರೆ ಸಿದ್ಧರಾಮನಂತಾಗಬೇಕು.
ವಿರಾಗಿಣಿಯಾದರೆ ಮಹಾದೇವಿಯಕ್ಕನಂತಾಗಬೇಕು.
ವಿರಕ್ತನಾದರೆ ಅಲ್ಲಮನಂತಾಗಬೇಕು, ಸಿದ್ಧಲಿಂಗೇಶ್ವರನಂತಾಗಬೇಕು.
ಜ್ಞಾನಿಯಾದರೆ ಚನ್ನಬಸವಣ್ಣನಂತಾಗಬೇಕು.
ದಾಸೋಹಿಯಾದರೆ ಬಸವಣ್ಣನಂತಾಗಬೇಕು.
ಶರಣಬಸವನಂತಾಗಬೇಕು, ಶ್ರೀ ಶಿವಕುಮಾರಸ್ವಾಮಿಗಳಂತಾಗಬೇಕು.
ವಿಜ್ಞಾನಿಯಾದರೆ ಐನ್‌ಸ್ಟೈನ್‌ನಂತಾಗಬೇಕು.
ಕರುಣಾಳುವಾದರೆ ಬಸವಣ್ಣನಂತಾಗಬೇಕು, ಕ್ರೈಸ್ತನಂತಾಗಬೇಕು.
ಕಿರಿಯನಾದರೆ ನನ್ನಂತಾಗಬೇಕು.
ಸರ್ವಶೂನ್ಯ ನಿರಾಲಂಬಿಯಾದರೆ ನಿನ್ನಂತಾಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೦

ಆಕಾಶವಾಣಿ ಬಂತು, ಸಮಾಚಾರ ಪತ್ರಿಕೆಗಳು ನಿಲ್ಲಲಿಲ್ಲ.
ದೂರದರ್ಶನ ಬಂತು, ಆಕಾಶವಾಣಿ ಹೋಗಲಿಲ್ಲ.
ಯಂತ್ರಗಳು ಬಂದವು, ಮಾನವನ ಬೇಡಿಕೆ ಅಳಿಸಲಿಲ್ಲ.
ಕಂಪ್ಯೂಟರು ಬಂದವು, ಮಾನವನ ಬುದ್ಧಿಮತ್ತೆಗೆ ಚ್ಯುತಿ ಬರಲಿಲ್ಲ.
ಯಂತ್ರಗಳು ಯಂತ್ರಗಳೇ,
ಮಾನವ ದೇವನಾಗಬಲ್ಲ, ಯಂತ್ರಗಳು ದೇವನಾಗಬಲ್ಲವೆ?
ದೇವ ನಿರ್ಮಿತ ಯಂತ್ರಕೆ, ಮಾನವ ನಿರ್ಮಿತ ಯಂತ್ರಗಳು
ಸಮವಾಗಬಲ್ಲವೆ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೧

ಮಾನವ ಕವಿಯಾಗಬಲ್ಲ, ವಿಜ್ಞಾನಿಯಾಗಬಲ್ಲ,
ತತ್ವಜ್ಞಾನಿಯಾಗಬಲ್ಲ, ಸಾಹಿತಿಯಾಗಬಲ್ಲ.
ಮೀನಿನಂತೆ ಸಮುದ್ರದಲೀಸಬಲ್ಲ.
ಹಕ್ಕಿಯಂತೆ ಆಕಾಶದಲಿ ಹಾರಾಡಬಲ್ಲ.
ನಕ್ಷತ್ರ ನೀಹಾರಿಕೆಗಳ ಮೀರಿ ಪ್ರಯಾಣಿಸಬಲ್ಲ.
ಈಶ ಸೃಷ್ಟಿಗೆ ಪ್ರತಿ ಸೃಷ್ಟಿ ಮಾಡಬಲ್ಲ.

ಮಾನವ ತಾನು ತಾನಾಗಬಲ್ಲನೆ? ಆದವರೆಷ್ಟು ಜನ?
ಇದು ಸುಲಭವೆ? ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೨

ಮಾತುಗಳು, ಮಾತುಗಳು, ಮಾತುಗಳು, ಮಾತುಗಳ ಕೇಳಿ ಕಿವಿ ಕಿವುಡಾದವು,
ಸಂಪ್ರದಾಯ, ಸಂಪ್ರದಾಯ, ಸಂಪ್ರದಾಯಗಳ ಆರ್ಭಟಕೆ
ತತ್ತರಿಸಿತು ಮಾನವತೆ.
ಜಾತಿಗಳು, ಜಾತಿಗಳು, ಜಾತಿಗಳು ಜಂಜಾಟದಲಿ
ನರಳಿತು ಮಾನವತೆ.
ಧರ್ಮಗಳು, ಧರ್ಮಗಳು, ಧರ್ಮಧರ್ಮಗಳು ಬರಿಮಾತಿನಲಿ,
ಕಳೆದುಕೊಂಡಿತು ಧರ್ಮ, ತನ್ನ ನಿಜದ ನಿಲವ.
ರಾಷ್ಟ್ರ ಸಂವಿಧಾನ ಬರಿ ಮಾತಿನ ಮಾಲೆಯಾಗದಿರಲಿ,
ಜಾತಿಯಾಧಾರದ ಮೇಲೆ ನರಮೇಧ ನಡೆಯದಿರಲಿ.
ಸಂಪ್ರದಾಯ ಧರ್ಮದ ಮೇಲೆ ಅಟ್ಟಹಾಸ ನಡೆಸದಿರಲಿ.
ಮಾನವ ಧರ್ಮವೇ ನಿಜವಾದ ಧರ್ಮವಾಗಲಿ.
ಇದು ವಿಶ್ವಧರ್ಮದ ಸೂತ್ರವಾಗಲಿ.
ವಿಶ್ವರಾಷ್ಟ್ರ ಸಂಸ್ಥೆಯ ಘೋಷಣೆಯಾಗಲಿ,
ಮಾನವತೆ ಉಳಿಯಲಿ, ಬೆಳೆಯಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೩

ಅಣುಬಾಂಬು ಆತ್ಮಬಾಂಬಿಗಿಂತ ಶಕ್ತಿಶಾಲಿಯೆಂದರು ಗಾಂಧೀಜಿ,
ಅಂದು ಅಶ್ವತ್ಥಾಮನ ಬ್ರಹ್ಮಾಸ್ತ್ರ ವಿಫಲ,
ಇಂದು ಗಾಂಧೀಜಿ ಅಹಿಂಸಾಸ್ತ್ರ ಸಫಲ,
ನಡುಗಿಸಿತಿದು ಪ್ರಬಲ ರಾಷ್ಟ್ರವ.
ರಾಜಕಾರಣದಲಿ ಆಧ್ಯಾತ್ಮ ಬಲದ ಪ್ರಯೋಗ,
ಬಸವತತ್ವಕ್ಕೊದಗಿಬಂತು ಮತ್ತೊಮ್ಮೆ ಜಯದ ಯೋಗ.
ಅಹಿಂಸೆಯಿಂದ ಗಳಿಸಿದೀ ಸ್ವಾತಂತ್ರ್ಯ
ಅಹಿಂಸೆಯಿಂದಲೇ ಉಳಿಯಬೇಕು, ದೇಶ ಬೆಳೆಯಬೇಕು.
ಬೇಕು ನಮ್ಮ ನಿಮ್ಮೆಲ್ಲರ ತ್ಯಾಗವಿದಕೆ,
ಮರೆತು ಹೋಗದಿರಲಿ ರಾಷ್ಟ್ರಪಿತನ ಪ್ರಯೋಗ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೪

ವೀರಶೈವಾಚಾರಗಳು ಸರಳವಾಗಲಿ,
ಪರದೇಶದವರು ಆಚರಿಸುವಂತಾಗಲಿ,
ಪಂಚಾಚಾರಗಳು ಆಚರಣೆಗೆ ಬರಲಿ,
ಲಿಂಗಾಚಾರ ಪಂಚಾಚಾರಗಳ ತಾಯಿಬೇರು.
ಇಷ್ಟಲಿಂಗ ಎಲ್ಲರೆದೆಯ ಮೇಲೆ ನಲಿದಾಡಲಿ,
ಇಷ್ಟಲಿಂಗದೀಕ್ಷೆ ಸರಳವಾಗಲಿ,
ತಂದೆಯಿಂದಲೇ ಮಕ್ಕಳಿಗೀ ದೀಕ್ಷೆ ನಡೆಯಲಿ.
ಶಿವಾಚಾರ ಕಡ್ಡಾಯವಾಗಲಿ,
ಲಿಂಗಧಾರಿಗಳಲಿ ಕುಲವನರಿಸದಿರಲಿ.
ಇವರೊಳು ಕೊಡಕೊಳುವ ವ್ಯವಹಾರ ಮುಕ್ತವಾಗಲಿ.
ನಡೆನುಡಿಯಲಿ ಪರಿಶುದ್ಧತೆ ಬರಲಿ,
ಕಾಯಕ ದಾಸೋಹದಾಚರಣೆ ನಿಷ್ಠೆ ಬೆಳೆಯಲಿ,
ಎಲ್ಲರೊಡನೆ ಬೆರೆಯುವ ಭಾವ ಬೆಳೆಯಲಿ.
ಪರಧರ್ಮ ಸಹಿಷ್ಣುತೆ ಉಳಿದು ಬೆಳೆದುಬರಲಿ,
ನಮ್ಮತನವನುಳಿಸುವುದ ಮರೆಯದಿರಲಿ.
ವೀರಶೈವವೀಪರಿ ಸರಳವಾಗಲಿ.
ವಿಶ್ವಧರ್ಮವಾಗಿ ಬೆಳೆಯಲಿ,
ಹಳೆಯಬೇರಿನಲಿ ಹೊಸಚಿಗುರು ಮೂಡಿಬರಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೫

ವೈಯಕ್ತಿಕ ಹಿತ, ಕೌಟುಂಬಿಕ ಹಿತ,
ಗ್ರಾಮ ಪಟ್ಟಣಗಳ ಹಿತ, ಸಮಾಜದ ಹಿತ,
ಧರ್ಮದ ಹಿತ, ನಾಡ ಹಿತ, ರಾಷ್ಟ್ರ ಹಿತ,
ಅಂತರ್ರಾಷ್ಟ್ರೀಯಹಿತ, ಇವೆಲ್ಲವೂ ಬೇಕು,
ಮನುಕುಲದ ಉಳಿವಿಗೆ ಬೆಳವಣಿಗೆಗೆ.
ಇವೆಲ್ಲದಕಿದೆ ಲಕ್ಷ್ಮಣರೇಖೆಯೊಂದು,
ನಡೆಯಬೇಕಲ್ಲ ವ್ಯವಹಾರಗಳು
ಪರಿಮಿತಿಯಲೀ ರೇಖೆಯ.
ಸೀತೆ ಲಕ್ಷ್ಮಣರೇಖೆ ದಾಟಿದಳು.
ಅನಾಹುತಕೆ ಔತಣಕೊಟ್ಟಳು.

ರೇಖೆಯ ಉಲ್ಲಂಘನೆಯಾಗದಿರಲಿ,
ಘರ್ಷಣೆಗೆ ಆಸ್ಪದವಾಗದಿರಲಿ.
ಸಕಲಜೀವಾತ್ಮರ ಹಿತವೇ ಮೂಲಮಂತ್ರವಾಗಲಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೬

ಹಳೆಯದಾಯಿತು ದೇವಾಲಯ ಸಂಸ್ಕೃತಿ,
ದೇವಾಲಯಗಳ ನಿರ್ಮಾಣ ನಿಲ್ಲಲೇ ಇಲ್ಲ.
ಕೋಟಿಕೋಟಿ ರೂಪಾಯಿಗಳ ಹಣ ಸುರಿವುದಕೆ.
ಧರ್ಮದೇವರುಗಳ ಗೋರಿ ಕಟ್ಟುತ್ತಲೇ ಇದೆ ಈ ಸಮಾಜ
ಬಡಬಗ್ಗರ ತುತ್ತಿನ ಚೀಲಗಳಿಗೆ ಸಂಚಕಾರ ತರುತ್ತಲೇ
ಇದೆ ಈ ಸಮಾಜ.
ಜಲಾಶಯಗಳು, ಯಂತ್ರ ಶಾಲೆಗಳು,
ಕೃಷಿತರಬೇತಿ ಧಾಮಗಳು, ಕೈಗಾರಿಕಾ ಕೇಂದ್ರಗಳು,
ಸಂಶೋಧನಾ ಕೇಂದ್ರಗಳು, ವಿದ್ಯಾಸಂಸ್ಥೆಗಳು,
ಸಾಹಿತ್ಯ ಸಂಗೀತ ಕೇಂದ್ರಗಳು, ಮಠಮಾನ್ಯಗಳು,
ದಾಸೋಹ ಕೇಂದ್ರಗಳು, ಯೋಗತರಬೇತಿ ಶಿಬಿರಗಳು.
ಇವು ಆಧುನಿಕ ದೇವಾಲಯಗಳಯ್ಯ.
ಹೊಟ್ಟೆಗೆ ನೆತ್ತಿಗೆ ಆಹಾರ ಇವುಗಳಿಂದ ಲಭ್ಯವಯ್ಯ.
ದೇಹಮನಕ್ಕಿವುಗಳಿಂದ ತೃಪ್ತಿಯಯ್ಯ.
ಇಹಪರದ ಸುಖಸಾಧನೆ ಇವುಗಳಿಂದಯ್ಯ.
ಸ್ಥಾವರಗಳಿವರೆ ಅಳಿಯಲಿ, ಜಂಗಮ ಬೆಳೆಯಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೭

ಹೋಮ ಹವನಗಳ ಮಾಡುವದು ಬೇಡ,
ದ್ರವ್ಯದ ಕೇಡುಬೇಡ.
ಈ ವಿಜ್ಞಾನಯುಗದಲ್ಲಿಯೂ ಸಂಪ್ರದಾಯದ
ತಾಂಡವ ಲೀಲೆಯೆ?
ಈ ವೈಚಾರಿಕ ಯುಗದಲ್ಲಿಯೂ ಆಗಬೇಕೆ
ಧರ್ಮವೊಂದು ಮೂಢನಂಬಿಕೆ?
ಚಂಡಿಯಜ್ಞ, ವಿಶ್ವಶಾಂತಿಯಜ್ಞ,

ಮಳೆತರಿಸಲು ಯಜ್ಞ, ರಾಜ್ ಬಿಡುಗಡೆಗೂ ಯಜ್ಞ
ಫಲಕೊಟ್ಟವೇ ಈ ಹೋಮ ಹವನ ಯಜ್ಞಗಳು?
ನಿಲ್ಲಲೀ ಮೂಢನಂಬಿಕೆಗಳ ಹಾವಳಿ,
ಹೊಟ್ಟೆಗೆ ಅನ್ನ, ಮೈಗೆ ಬಟ್ಟೆ, ನೆತ್ತಿಗೆ ಜ್ಞಾನ
ನೀಡುವ ಹೋಮಗಳು ನಡೆಯಲಿ,
ರೂಪಿಸಲು ಅಂಥ ಯೋಜನೆಗಳ ಸರಕಾರ, ಸಮಾಜ,
ನಿಲ್ಲಲಿ ದ್ರವ್ಯದ ಕೇಡು, ಆಗಲಿದರಿಂದ ಜನ ಕೋಟಿಯ ಉದ್ಧಾರ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೮

ಭಾರತ ಸ್ವಾತಂತ್ರ ಹೋರಾಟದ ಕಥೆಯೇನೆಂದು ಹೇಳಲಯ್ಯ!
ಅದೊಂದು ಧರ್ಮಯುದ್ಧವಯ್ಯ!
"ಸ್ವಾತಂತ್ರ ನನ್ನ ಜನ್ಮಸಿದ್ಧ ಹಕ್ಕು"
ಮೊಳಗಿತೀ ವೀರವಾಣಿ ಲೋಕಮಾನ್ಯ ತಿಲಕರಿಂದ,
ಧುಮುಕಿತೀ ದೇಶ ಸಾವು ಬದುಕಿನ ಹೋರಾಟದಲಿ.
ಪಾಂಚಜನ್ಯವನೂದಿದನು ರಾಷ್ಟ್ರಪಿತ ಗಾಂಧಿ,
ವೀರ ಜವಾಹರ, ಉಕ್ಕಿನೆದೆಯ ಸರದಾರ್,
ಧೀರ ಸುಭಾಸ ಕಟ್ಟಿದರು ತ್ಯಾಗ ಬಲಿದಾನದ ಕಂಕಣವ,
ಸುಭಾಸ್‌ನ ಸಾಹಸಚರಿತೆ ನೆನೆದರೆ
ಮೈನವಿರೇಳುವುದು! ಸ್ವಾತಂತ್ರ್ಯ ದುಂದುಭಿಯ ನಿನಾದ!
ಮತ್ತೆ ಕಿವಿದುಂಬುವದು!
'ಮಾಡು ಇಲ್ಲವೆ ಮಡಿ' ಬಂದಿತೀ ಆದೇಶ
ಇದಕ್ಕಾಗಿಯೇ ಮಡಿದವನಿಂದ.
ಮಾಡಿದವರೆಷ್ಟೋ ಮಡಿದವರೆಷ್ಟೋ ಜನ.
ಆ ಕಥೆ ಹೇಳಲು ಕೆಚ್ಚಿದೆಯೇಬೇಕು.
ತ್ಯಾಗ ಬಲಿದಾನಗಳು ವ್ಯರ್ಥವಾಗಲಿಲ್ಲ ಕೊನೆಗೆ,
ಕಾಲ್ತೆಗೆದರು ಬ್ರಿಟಿಷರಲ್ಲಿಂದ ಹೇಳ ಹೆಸರಿಲ್ಲದಂತೆ.
'ಸತ್ಯಮೇವ ಜಯತು' ಎಂಬ ಋಷಿವಾಣಿ ದಿಟವಾಯಿತು.
ಅಹಿಂಸೆಯ ಅಸ್ತ್ರಕ್ಕೆ ಜಯವಾಯಿತು.
ವಿಶ್ವಕಿದೊಂದು ಮಾದರಿಯಾಯಿತು.
ಗಳಿಸಿದೀ ಸ್ವಾತಂತ್ರ ಉಳಿಸಬೇಕಯ್ಯ,
ಒಳಹೊರಗಿನ ವೈರಿಗಳ ನಾಶಮಾಡಬೇಕಯ್ಯ,

ಮತ್ತೆ ಬೇಕಿದಕೆ ಬಲಿದಾನಗಳಯ್ಯ
'ಮರಣವೇ ಮಹಾನವಮಿ' ಇದು ಬಾಳಮಂತ್ರವಾಗಬೇಕಯ್ಯ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೫೯

ಭಾರತ ಸ್ವಾತಂತ್ರವಾಯಿತು,
ಕರ್ನಾಟಕ ದಾಸ್ಯದಲ್ಲಿಯೇ ಉಳಿಯಿತು.
ಕನ್ನಡ ಮಾತೆಯ ದೇಹಗಳಾಗಿದ್ದವು
ತುಂಡು ತುಂಡು,
ಇಪ್ಪತ್ತೆರಡು ತುಂಡುಗಳ ಜೋಡಿಸುವ
ಮಣಿಯ ಹೊತ್ತರೀದೇವಿಯ ಮಕ್ಕಳು:
ಸಾಹಿತಿಗಳು, ರಾಜಕೀಯ ಪಟುಗಳು,
ವೀರಯುವಕರು, ಹಿರಿಯರು,
ಕಿರಿಯರು, ಶ್ರೀಮಂತರು, ಬಡವರು,
ಪತ್ರಿಕೋದ್ಯಮಿಗಳು, ದಾರ್ಶನಿಕರು,
ಮಠದ ಸ್ವಾಮಿಗಳು.
ಸಿದ್ಧವನಳ್ಳಿ ನಿಜಲಿಂಗಪ್ಪ, ಆಲೂರ ವೆಂಕಟರಾಯರು,
ಬಿ.ಎಂ. ಶ್ರೀಕಂಠಯ್ಯ, ಶಿವಮೂರ್ತಿ ಶಾಸ್ತ್ರಿಗಳು,
ಫಕೀರಪ್ಪ ಹಳಕಟ್ಟಿಯವರು, ಕೆ. ಹನುಮಂತಯ್ಯ,
ಹರ್ಡೇಕರ್ ಮಂಜಪ್ಪ, ಹುಯಿಲಗೋಳು ನಾರಾಯಣರಾಯರು,
ಕುವೆಂಪು, ದ.ರಾ. ಬೇಂದ್ರೆಯವರು
ಊದಿದರಿವರು ರಣಕಹಳೆಯ,
ಕೊನೆಗೂ ಒಂದಾಯಿತು ಕನ್ನಡನಾಡು.
ಹೆಸರಾಯಿತಿದಕೆ ವಿಶಾಲ ಮೈಸೂರು.
ಹೆಸರಿಗೂ ನಡೆಯಿತು ಅಂತಃಕಲಹ
'ಕನ್ನಡವೆನಿಪ್ಪಾನಾಡು' ಎಂದು ಕರೆಯಿತು ಕವಿವಾಣಿ
ಸಹಸ್ರ ವರ್ಷಗಳ ಹಿಂದೆಯೇ.
ಮತ್ತೆ ಈ ಹೆಸರಿಡಲು ಬೇಕಾಯಿತು
ವರ್ಷ ಹದಿನೇಳಯ್ಯ.
ಸಾವಿರದೊಂಬೈನೂರಾ ಐವತ್ತಾರು
ಸಾವಿರದೊಂಬೈನೂರಾ ಎಪ್ಪತ್ತಮೂರು
ನಾಡದೇವಿಯ ಚರಿತ್ರೆಯ ಮೈಲುಗಲ್ಲುಗಳಯ್ಯ.

ನಾಡು ಒಂದಾದರೂ ಹೃದಯಗಳೊಂದಾಗಲಿಲ್ಲವಯ್ಯ,
ಭಾವನಾತ್ಮಕ ಏಕೀಕರಣವಾಗಲಿಲ್ಲಯ್ಯ,
ಆಗಬೇಕಾಗಿದೆ ಇನ್ನೂ ಹೃದಯಗಳ ಬೆಸುಗೆ,
ತೆರೆಯಬೇಕಾಗಿದೆ ಇನ್ನು ಇದರ ಭಾಗ್ಯದ ಬಾಗಿಲು.
ಉದಯವಾಗಲಿ ಬೇಗ ನಮ್ಮ ಸಮೃದ್ಧಿ ಕನ್ನಡ ನಾಡು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ ಬೀಡು.

೨೬೦

ಬಟ್ಟ ಬಯಲಲೊಂದು ಮಹಾಸ್ಫೋಟ,
ಪದ್ಮಕೋಟಿ ಸೂರ್ಯರ ಬೆಳಕು,
ನೋಡದಾದವು ಕಣ್ಣುಗಳು!
ಕಿವುಡಾದವು ಕಿವಿಗಳು!
ಇದೆಂಥ ಭ್ರಮೆ! ನೋಡಿದವರಾರು?
ಯಾರಾದರೂ ಇದ್ದರೆ ಆಗ?
ಕೇಳಿದವರಾರೂ ಇದ್ದರೆ ಆಗ?
ಶಕ್ತಿಯ ಚಿಲುಮೆ ಉಕ್ಕಿತು,
ಜ್ಯೋತಿರ್ಮೇಘ, ನೀಹಾರಿಕೆ
ನಕ್ಷತ್ರಗಳ ಹಡೆಯಿತು.
ಸೂರ್ಯ ಕುಟುಂಬ ಮಕ್ಕಳ ಪಡೆಯಿತು.
ಎಂಬತ್ತು ನಾಲ್ಕುಕೋಟಿ ಜೀವರಾಶಿಯ ಹಡೆಯಿತು.
ಮಾನವನುದಯ, ಈ ಲೀಲೆಯ ಹಾಡಿಹೊಗಳಲು,
ಹಾಡು ಮಾನವ, ಮನದುಂಬಿ ಹಾಡು.
ಅದಕ್ಕಾಗಿ ಹುಟ್ಟಿರುವ ನಿನ್ನ ಕಾಯಕ ಮಾಡು,
ನಮ್ಮ ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನಕೊಂಡಾಡು.

೨೬೧

ಪಠ್ಯಪುಸ್ತಕಗಳೇ ಶಿಕ್ಷಣದ ಜೀವಾಳವಯ್ಯ.
ಪಠ್ಯಪುಸ್ತಕಗಳಿಂದಲೇ ಈ ನೀತಿ ರೂಪಗೊಳ್ಳಬೇಕಯ್ಯ.
ನಮ್ಮ ಸಂಸ್ಕೃತಿಯ ಭವ್ಯತೆ, ದಿವ್ಯತೆ,
ವೈಚಾರಿಕತೆ, ವೈಜ್ಞಾನಿಕತೆ,
ಅವುಗಳಿಗಿವು ಉಸಿರಾಗಬೇಕಯ್ಯ.
ಯುಗನಾಡಿಯಮಿಡಿತ ಅಲ್ಲಿರಬೇಕಯ್ಯ
ನಮ್ಮ ಪಠ್ಯಪುಸ್ತಕಗಳಿವುಗಳಿಂದ ಹೊರತಯ್ಯ.

ಈ ಕೊರತೆ ನೀಗಬೇಕಯ್ಯ.
ಸಾರ್ಥಕ ಪುಸ್ತಕಗಳು ರಚನೆಯಾಗಲಯ್ಯ.
ಕೊಡುವ ಶಿಕ್ಷಣ ಅರ್ಥಪೂರ್ಣವಾಗಲಯ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬೨

ಶಿಕ್ಷಣ ಭಾರತೀಕರಣವಾಗಬೇಕು,
ಅದು ನಮ್ಮ ಪರಿಸರಕೆ ಪ್ರಸ್ತುತವಾಗಬೇಕು.
ಅಧ್ಯಾತ್ಮತೆಯ ಹಿನ್ನೆಲೆಯಿರಬೇಕು.
ವೈಜ್ಞಾನಿಕತೆಯದರಂಗವಾಗಬೇಕು.
ಸರ್ವಧರ್ಮ ಸಮನ್ವಯ ವಿಶ್ವಭ್ರಾತೃತ್ವಗಳ ಒಳಗೊಂಡಿರಬೇಕು.
ಮಾತೃಭಾಷೆ, ಪ್ರಾದೇಶಿಕ ಭಾಷೆಗಳು ಮಾಧ್ಯಮವಾಗಬೇಕು.
ಇಂಗ್ಲಿಷ್ ಭಾಷೆಯ ಬಿಡದಿರಬೇಕು,
ಇಂಥ ಶಿಕ್ಷಣ ಕೊಡಬೇಕು,
ನಮ್ಮ ದೇಶವನ್ನು ಕಾಪಾಡಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬೩

ನೀನು ಹುಟ್ಟಿಸಿದ ಭಾನುವನ್ನೇ ನೋಡಲಾಗದು
ಬರಿಗಣ್ಣಿನಿಂದ, ಅದಕೂ ಬೇಕು ಯಂತ್ರಗಳ ನೆರವು.
ನಿನ್ನ ಬೆಳಕು ಅನಂತಕೋಟಿ ಸೂರ್ಯರಶ್ಮಿಗೆ ಮಿಗಿಲು!
ಹೊರಗಣ್ಣಿನಿಂದ ನೋಡಲಾದೀತೇ ಅದನ್ನು!
ಅದಕ್ಕೂ ಬೇಕು ನೀನೀಡಿದ ಒಳಗಣ್ಣನೋಟ.
ಒಳಗಣ್ಣು ಹಣೆಯಲಿರಿಸಿದೆ
ಅದು ತೆರೆಯುವ ಉಪಾಯ ತಿಳಿಸಿದೆ.
ಆದ ತೆರೆಯಬೇಕು, ಪಶ್ಚಿಮದ ಕದ ತೆರೆಯಬೇಕು,
ನಿನ್ನನವಲೋಕಿಸಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬೪

ಈ ಹೇಸಿ ಮನಕೆ ನಿನ್ನ ನೆನೆವಾಸೆ,
ನೆನೆದರೂ ವಿಷಯಗಳ ಬಿಡದಾಸೆ.

ಅವತೊರೆಯದೆ ನೆನೆದರೇನು ಫಲ?
ನಿನ್ನ ನೆನೆಯುತ್ತಲೇ ಇರಬೇಕು.
ಬುದ್ಧಿ ಹೇಳುತ್ತಲೇ ಇರಬೇಕು.
ಸಜ್ಜನರಿಂದ ಛೀಮಾರಿ ಹಾಕಿಸುತ್ತಲೇ ಇರಬೇಕು.
ದುರ್ಜನರಿಂದ ದೂರವಿರಬೇಕು.
ಕೊನೆಗೊಂದು ದಿನ ಈ ಕೋತಿಯ ನಿಯಂತ್ರಿಸಬೇಕು.
ನಿನ್ನಿಂದ ಹುಟ್ಟಿದ ಮನವ ನೀನೇ ನಿಯಂತ್ರಿಸಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬೫

ಮನವೊಂದು ಮಣ್ಣ ಪುತ್ಥಳಿ,
ಕೆದಕಿದಷ್ಟು ಕೆಸರೇ ಕೆಸರು.
ಯೋಗಾಗ್ನಿಯಿಂದಿದು ಭಸ್ಮವಾಗಬೇಕು.
ಮಣ್ಣುತನವಳಿಯಬೇಕು.
ಚಿದಾಂಶ ಪ್ರಕಟವಾಗಬೇಕು.
ಇದು ನಿನ್ನ ಸೇರಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬೬

ಶರಣತತ್ವ ಬಾಳಬುತ್ತಿಯಾಗಬೇಕು
ಬಾಳ ಪ್ರಯಾಣ ಸಾಗಬೇಕು.
“ಉರಿಬರಲಿ ಸಿರಿಬರಲಿ”
ಕಂಗಡದೆ ದಾರಿ ನಡೆಯಬೇಕು.
ಊರ ಸೇರಬೇಕು, ನಿನ್ನ ಕಾಣಬೇಕು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೬೭

ಪ್ರತಿನಿತ್ಯ ಪ್ರತಿಕ್ಷಣ ಬಸ್ಸುಗಳು ಓಡುತ್ತಲೇ ಇವೆ,
ರೈಲುಗಾಡಿಗಳು ಓಡುತ್ತಲೇ ಇವೆ,
ಹಡಗುಗಳು ಚಲಿಸುತ್ತಲೇ ಇವೆ,
ವಿಮಾನಗಳು ಹಾರುತ್ತಲೇ ಇವೆ,
ಪ್ರಯಾಣ ಮುಹೂರ್ತ ನಿರ್ಣಯಿಸದವರಾರಿವಕೆ?
ವಾರ ತಿಥಿ ನಕ್ಷತ್ರಗಳನ್ನು ನೋಡಿ ಪ್ರಯಾಣಿಸುವವೇ ಇವು?

ಪ್ರಯಾಣ ಮುಹೂರ್ತವೆಂಬುದೊಂದು ಭ್ರಮೆ!
ಅದೊಂದು ಮೂಢನಂಬಿಕೆ,
ನಿರಂತರ ಪ್ರಯಾಣ ಚಟುವಟಿಕೆಗಳೆ ಇದಕೆ ಸಾಕ್ಷಿ.
ಈ ಮಾತು ನಮನಿಮಗೆಲ್ಲ ಮನಸಾಕ್ಷಿ,
ಬಸವಣ್ಣನ ಮಾತೆ ಇದಕೆ ಸಾಕ್ಷಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ಇದಕೆ ನೀನೆ ಸಾಕ್ಷಿ.

೨೬೮

ಕಾಲೇಜಿನ ಡಿಗ್ರಿ ವಿದ್ಯೆಯ ಅಂತ್ಯವಲ್ಲ,
ಅದು ವಿದ್ಯಾರಂಭ.
ಪದವಿ, ವಿದ್ಯಾ ಪ್ರಪಂಚಕ್ಕಡಿಯಿಡಲು ಗೇಟ್‌ಪಾಸ್
ಜೀವನಪರ್ಯಂತ ನಡೆಯಬೇಕು ವಿದ್ಯಾಭ್ಯಾಸ.
ನಿರಂತರ ಅಧ್ಯಯನದಿಂದ ಜ್ಞಾನವರ್ಧನೆ,
ಅದರಾಚರಣೆಯಿಂದ ಜನ್ಮ ಪಾವನ
ಕಲಿಯುವದ ಬಿಡಬೇಡ, ಕಲಿಸುವದ ಬಿಡಬೇಡ
ಜ್ಞಾನಾರ್ಜನೆ, ಜ್ಞಾನದಾಸೋಹ ನಡೆಯುತ್ತಲೇ ಇರಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನಿಗೆ
ಸೇವೆಸಲ್ಲಿಸುತಲಿರಲಿ.

೨೬೯

ಹೆಣ್ಣು ಚಂಚಲೆಯಂತೆ,
ಆಸ್ಟ್ರೇಲಿಯದ ಹವಾಮಾನ ಚಂಚಲ ಹೆಣ್ಣು,
ಈಗಿದ್ದ ಬುದ್ಧಿ ಇನ್ನೊಂದೆಡೆಗಳಿಗಿಲ್ಲ.
ಆಸ್ಟ್ರೇಲಿಯದ ಹವಾಮಾನ ಕ್ಷಣತಲ್ಲಿಯೇ ಬದಲು
ಶಕೆಯಿಂದ ನಿಮಗೆ ಬಿಸಿಯ ಅನುಭವ,
ಕ್ಷಣಾರ್ಧದಲ್ಲಿಯೇ ನಡುಗುವ ಚಳಿ,
ಮತ್ತೊಂದು ಗಳಿಗೆಗೆ ಹೊರಗೆ ಮಳೆ,
ಬೇಸಿಗೆ, ಮಳೆಗಾಲ, ಚಳಿಗಾಲ ಒಂದೇ ದಿನದಲ್ಲಿ.
ಅಂಟಾರ್ಟಿಕ್ ಹತ್ತಿರದ ಈ ಪ್ರದೇಶದಲ್ಲಿ,
ಇಂಥ ಚಂಚಲ ಹೆಣ್ಣು ಬ್ರಿಟಿಷರ ವಶ,
ಮೆಚ್ಚಬೇಕು ಅವರ ಸಾಹಸ.
ಸಾಹಸದ ಪಾಠ ಕಲಿಯಬೇಕವರಿಂದ,

ಎದುರಿಸಬೇಕು ನಿಸರ್ಗದ ಪ್ರಕೋಪಗಳ
ಸಂತೋಷದಿಂದ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.
ಸಾಹಸ ಪ್ರಿಯನಲ್ಲವೆ?

೨೭೦

ಅಮೆರಿಕಕೂ ಭಾರತಕೂ ಸಾವಿರಾರುಮೈಲುಗಳ ಅಂತರ
ಅಲ್ಲಿಯ ಸಂಸ್ಕೃತಿಗೂ ಇಲ್ಲಿಯ ಸಂಸ್ಕೃತಿಗೂ ಅಜಗಜಾಂತರ
ಭೌತಿಕ ನಾಗರಿಕತೆಯ ಅಟ್ಟಹಾಸವಲ್ಲಿ,
ಮಾನವೀಯ ಸಂಸ್ಕೃತಿಯ ಸಹವಾಸವಿಲ್ಲಿ,
ಹಿಂದೊಮ್ಮೆ ಅಲೆಗ್ಝಾಂಡರ್ ಈ ದೇಶವ ಗೆದ್ದ
ಇಲ್ಲಿಯ ಮಾನವೀಯ ಮೌಲ್ಯಗಳಿಗೆ ಸೋತುಹೋದ.
ಇಲ್ಲಿ ಬಂದವರೆಲ್ಲ ಮಾನವರಾದರು;
ಇಲ್ಲಿಯ ಸಂಸ್ಕೃತಿಯಲಿ ಲೀನವಾದರು.
ಅಮೆರಿಕಾದಲ್ಲಿದ್ದೂ ಉಳಿಸಿಕೊಳ್ಳಬೇಕೀ ಸಂಸ್ಕೃತಿಯ
ಇಲ್ಲಿಯ ಮಾನವೀಯತೆಯ ಅಲ್ಲಿಗೆ ರಫ್ತಾಗಬೇಕು.
ಅಲ್ಲಿಯ ವಿಜ್ಞಾನ ತಂತ್ರಜ್ಞಾನವಿಲ್ಲಿಗೆ ಆಮದಾಗಬೇಕು.
ಹೊಸಬಾಳ ರೀತಿಯೊಂದು ರೂಪುಗೊಳ್ಳಬೇಕು,
ಇಹಪರಗಳೆರಡಕ್ಕೂ ಸಲ್ಲಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೭೧

ಅಮೆರಿಕಾದಲ್ಲಿ ಬಿಸಿಲಿದ್ದರೂ ಕೊರೆಯುವ ಚಳಿ,
ಹಿಮಬಿದ್ದರೂ ಬಿಸಿಲಿನ ಚೆಲ್ಲಾಟ
ಇದು ನಿಸರ್ಗದ ವಿಚಿತ್ರ ಆಟ.
ಸೂರ್ಯನಷ್ಟು ಶಕ್ತಿಹೀನನಲ್ಲಿ, ಶರತ್‌ಕಾಲದಲ್ಲಿ.
ಚಳಿಗಾಲದಲ್ಲಿ.
ಬಿಸಿಲಿದ್ದರೂ ಮಳೆ ಭಾರತದಲ್ಲಿ.
ನಿಸರ್ಗದ ಚೇಷ್ಟೆಗಳು ಮಾನವನಿಗೆ ಗೊತ್ತು,
ನಿಸರ್ಗದ ಸವಾಲುಗಳನೆದುರಿಸಬಲ್ಲ,
ಹವಾಮಾನಕ್ಕೆ ತಕ್ಕಂತೆ ವೇಷ ಧರಿಸಬಲ್ಲ,
ಆಹಾರ ಪಾನೀಯ ಸೇವಿಸಬಲ್ಲ,
ತನ್ನ ರಕ್ಷಿಸಿಕೊಳ್ಳಬಲ್ಲ,

ನಿಸರ್ಗದ ಸರಸಾಟ ಸಹಿಸಬಲ್ಲ,
ನೀ ಕೊಟ್ಟ ಬುದ್ಧಿಯಿಂದ ನಿನಗೇ
ಸವಾಲನೊಡ್ಡಬಲ್ಲ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೭೨

ಭಾರತದಲಡಿಗೆ ರುಚಿರುಚಿ
ಅಮೆರಿಕಾದಲಿಡಿಗೆ ಶುಚಿಶುಚಿ
ಇದಕಿಲ್ಲ ರುಚಿರುಚಿ.
ಇಲ್ಲಿಯ ತರಕಾರಿಗಳು ನೋಡಲು ಬಲು ಚೆಂದ,
ಇವುಗಳಿಗಿಲ್ಲ ರುಚಿಯ ಅಂದ.
ಸತ್ವಯುತ ಆಹಾರ ಅವರ ಗುರಿ.
ರುಚಿಗೆ ಆದ್ಯತೆ ನಮ್ಮ ಆಹಾರದ ಪರಿ.
ಸತ್ವರುಚಿಗಳ ಸಮನ್ವಯ ದೇಹಮನಕಾನಂದಮಯ.
ದೇಹಮನಗಳು ಬೆಳೆಯಬೇಕು.
ಬಾಳು ಸುಸಂಸ್ಕೃತವಾಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ ಮೆಚ್ಚಬೇಕು.

೨೭೩

'ಅತಿಥಿದೇವೋಭವ' ಎಂಬುದು ನಮ್ಮ ಸಂಸ್ಕೃತಿ
'ಮೊದಲು ತಿಳಿಸಿಬಂದರೆ ಮಾತ್ರ ಊಟ' ಇದು ಅವರ ಸಂಸ್ಕೃತಿ.
ತಿಳಿಸದೆ ಹೋದರೆ ನಿಮಗಿಲ್ಲ ಊಟ,
ನೋಡಬಹುದು ನಿಮ್ಮೆದುರಿಗೆ ಅವರು ಮಾಡುವ ಊಟ
ಊಟ ಮಾಡುವಾಗ ಯಾರೇ ಬರಲಿ,
ಬಂದವರಿಗೆ ಮೊದಲು ಊಊಟ,
ನಮಗೆ ಉಪವಾಸವಾದರೂ ಅತಿಥಿಗಳಿಗೆ ಊಟ,
ಇದು ನಮ್ಮ ಸಂಸ್ಕೃತಿ.
ಕಲಿಯಬೇಕಿದನು ಅಮೆರಿಕನ್ನರು ನಮ್ಮಿಂದ,
ನಾಗರಿಕತೆ ಬೆಳೆದರೇನು? ಸಂಸ್ಕೃತಿ ಬೆಳೆಯಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ ಮೆಚ್ಚಬೇಕು.

೨೭೪

ಅಮೆರಿಕಾದ ಮಾಲ್‌ಗಳ ಅಂದವೇ ಅಂದ
ಶಿಸ್ತೇ ಶಿಸ್ತು, ಶುಚಿಯೋ ಶುಚಿ, ಆಡಂಬರವೋ ಆಡಂಬರ,
ಪುಟ್ಟ ವಿಶ್ವಗಳೀ ವಾಣಿಜ್ಯ ಕೇಂದ್ರಗಳು.
ವಿಶ್ವಕೋಶದಲಿ ಸಿಗದ ವಿಷಯವಿಲ್ಲ,
ಮಾಲ್‌ಗಳಲ್ಲಿ ಸಿಗದ ವಸ್ತುವಿಲ್ಲ.
ಬೇರೆ ಬೇರೆ ವಿಷಯಗಳಿಗೆ ಬೇರೆ ಬೇರೆ ವಿಶ್ವಕೋಶ.
ಬೇರೆ ಬೇರೆ ವಸ್ತುಗಳಿಗೆ ಬೇರೆ ಬೇರೆ ಮಾಲ್‌ಗಳು.
ಒಂದೊಂದು ಮಾಲ್ ಒಂದೊಂದು ವಿಶ್ವಕೋಶ.
ಗಿರಾಕಿಗಳು ತಮ್ಮ ವಸ್ತುಗಳನಾರಿಸಿ ತರುವದ
ನೋಡುವದೇ ಚಂದ. ವಸ್ತುಗಳು ಹೊರಗಿದ್ದರೂ
ಕಳೆದುಹೋಗುವದೇ ಇಲ್ಲ.
ಪ್ರಾಮಾಣಿಕತೆಗಿದೊಂದು ದಿವ್ಯ ನಿದರ್ಶನ
ಈ ಶಿಸ್ತು, ಈ ಅಂದ, ಈ ಪ್ರಾಮಾಣಿಕತೆ
ನಮಗೇಕೆ ಬಾರದು? ಬರುವಂತೆ ಮಾಡು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೭೫

ಅಮೆರಿಕಾದ ವೃಕ್ಷಗಳಿಗೆ ಶ್ರಾವಣದ ಅಲಂಕಾರ,
ಬೇಸಿಗೆಯಲ್ಲಿ, ಬಣ್ಣಬಣ್ಣದ ಅಲಂಕಾರ ಶರದ್‌ಋತುವಿನಲ್ಲಿ
ಹಸಿರು, ಹಳದಿ, ಕಿತ್ತಳೆ ಮಿಶ್ರ ವರ್ಣಗಳ
ಸೀರೆಯನುಟ್ಟು ಮೆರೆಯುವಳು ನಿಸರ್ಗ ನೀರೆ,
ಇದ ನೋಡಿದ ರಸಿಕ ಕವಿಯಾಗದಿರಲಾರ.
ಈ ಮದುಮಗಳ ಬೆಡಗಿಗೆ ಮರುಳಾಗದಿರಲಾರ.
ಮದುವೆಯಾಗಿ ಕೆಲತಿಂಗಳಲ್ಲಿಯೇ ವೈಧವ್ಯಪ್ರಾಪ್ತಿ?
ಶರದೃತುವಿನ ಅಂತ್ಯ ಚಳಿಗಾಲದ ಪ್ರಾರಂಭ,
ಈಕೆಯ ಮುತ್ತೈದೆತನ ಅಳಿಯಬೇಕೆ?
ಇದು ನಿನ್ನ ಚಲ್ಲಾಟ, ನಿನ್ನ ಮೋಜಿನಾಟ,
ನೀನು ಬಲು ನಿಷ್ಕರುಣಿ ಇಷ್ಟಲಿಂಗರೂಪಿ
ಹಂಪೆಯ ವಿರೂಪಾಕ್ಷೇಶ್ವರ.

೨೭೬

ಜೋಗಜಲಪಾತವೊಂದು ವಿಶ್ವದ ಅದ್ಭುತ!
ನಯಗ್ರ ಜಲಪಾತ ಮತ್ತೊಂದು ಕಂಡರಿಯದ ಅದ್ಭುತ!
ಜೋಗದ ಎತ್ತರ ಒಂದು ಸಾವಿರ ಅಡಿ,
ಶರಾವತಿ ನದಿಯ ಕೊಡಗೂಸದು.
ಕಿರುಸಾಗರದ ಕೂಸು ನಯಾಗ್ರ ಜಲಪಾತ,
ಇದರಿಂದ ಉದಯ ನಯಾಗ್ರ ನದಿ.
ನದಿಯಿಂದ ಜಲಪಾತವಲ್ಲ,
ಜಲಪಾತದಿಂದ ನದಿ, ಇದು ಮತ್ತೊಂದು ವೈಚಿತ್ರ್ಯ!
ಜಲಪಾತದ ವಿಸ್ತಾರ ನೂರಾರು ಮೀಟರುಗಳು.
ಸಾಗರವೇ ಆಕಾಶದಿಂದ ಪುಟಿಯುವಂತೆ ನಯಾಗ್ರ!
ಶರಾವತಿ ಧುಮುಕಿ ಪಾತಾಳನೇರುವಂತೆ ಜೋಗ!
ರುದ್ರರಮಣೀಯತೆಯ ಸಾಕಾರ ದೃಶ್ಯಗಳಿವು!
ಬೀಳುವ ಪರಿ ಬೇರೆಯಾದರೂ ರಮಣೀಯವೀ ಅದ್ಭುತ!
ನಿಸರ್ಗದ ಸೊಬಗೊಂದೇ ಚಂದವೊಂದೇ ಇವುಗಳಲ್ಲಿ,
ಮನುಕುಲಕೆ ಇವುಗಳ ಸೇವೆಯೊಂದೇ.
ಶಿವನ ಜಡಿಯಿಂದ ಹೊರಹೊಮ್ಮಿದ ಗಂಗೆಯೊಂದೇ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ದೇಶವಾವುದಾದಡೇನು? ನಿನ್ನ ಲೀಲೆಯೊಂದೆ.

೨೭೭

ಅಮೆರಿಕಾದಲ್ಲಿ ಚುನಾವಣೆಗಳ ಹೋರಾಟ
ದೂರದರ್ಶನಗಳಲಿ ಪ್ರಚಾರದ ಆರ್ಭಟ,
ಮನರಂಜನೆಯ ರಸದೂಟ,
ಸಾಧನೆಯ ಕಥೆಗಳ ಬಿತ್ತರದಾಟ,
ಪರಸ್ಪರ ಸ್ಪರ್ಧೆಯ ಹೆಣಗಾಟ,
ಭ್ರಷ್ಟಾಚಾರವಿಲ್ಲವೆಂದರೂ ಇದೆಯೆಂಬ ಪೇಚಾಟ,
ಮಾಧ್ಯಮದವರಿಗಿದು ಹೊಲಸು ರಾಜಕೀಯ,
ಆದರೂ ಇಲ್ಲಿಯದು ತತ್ವಬದ್ಧ ರಾಜಕೀಯ,
ಯಾರಿಗೂ ಇಲ್ಲ ಮತ ನೀಡಲು ಒತ್ತಾಯ,
ಸ್ವಯಂಪ್ರೇರಿತ ಮತದಾನ, ಚುನಾವಣೆಗಳ ಮುಕ್ತಾಯ.
ಇದು ನಾವು ಅನುಸರಿಸಬೇಕಾದ ನ್ಯಾಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ಮೆಚ್ಚನನ್ಯಾಯ.

೨೭೮

ತಾಪಮಾನ ಕೇವಲ ಎರಡು ಡಿಗ್ರಿ,
ಆದರೂ ಬಿಟ್ಟುಬಿಡದೆ ಸುರಿಯುತಿದೆ ಮಳೆ,
ಈ ಹವಾಮಾನದಲ್ಲಿಯೂ ಚಟುವಟಿಕೆ ನಿರಂತರ,
ಹಿಮಗಟ್ಟುವ ಚಳಿಗೂ ಸುಡುವ ಬಿಸಿಲಿಗೂ,
ತಾಪಮಾನದಲ್ಲಿ ಬಹಳ ಅಂತರ.
ಬಿಸಿಲಿರಲಿ, ಮಳೆಯಿರಲಿ, ಚಳಿಯಿರಲಿ,
ಅದು ನಿನ್ನ ಇಷ್ಟ. ಎಡಬಿಡದೆ
ನಡೆಯುತಿದೆ ಸೃಷ್ಟಿ ಚಕ್ರ! ಅದೇನೇ ಇರಲಿ,
ಬಿಡರಿವರು ತಮ್ಮ ತಮ್ಮ ಸ್ವಕಾಯಕ ಕಜ್ಜ!
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನೀ ಮೆಚ್ಚಲೇ ಬೇಕಿವರೀನಿಷ್ಠೆಗೆ.

೨೭೯

ಸರ್ವಶೂನ್ಯ ನಿರಾಲಂಬ ತರಂಗಾತೀತ,
ಶೂನ್ಯತರಂಗಮಯ,
ಶಕ್ತಿ ತರಂಗಮಯ
ತರಂಗಗಳಿಂದ ಕಣಗಳ ಸೃಷ್ಟಿ,
ಕಣಗಳಿಂದ ಪರಮಾಣು ಸೃಷ್ಟಿ,
ಪರಮಾಣುಗಳಿಂದ ವಿಶ್ವಸೃಷ್ಟಿ,
ವಸ್ತುಗಳೆಲ್ಲ ಶಕ್ತಿಮಯ,
ವಿಶ್ವವೆಲ್ಲ ಶಕ್ತಿಮಯ,
ಭಾವನೆಗಳೆಲ್ಲ ತರಂಗಮಯ,
ಭಾವನೆಗಳು ಉದಾತ್ತ ತರಂಗಗಳ ಸೂಸಲಿ.
ಯಾಕೆಂದಡೆ 'ಯುದ್ಧಾವಂ ತದ್ಭವತಿ
ಭಾವನೆಗಳ ದೈವೀಕರಣವಾಗಲಿ,
ನಿನ್ನರಸುವತ್ತ ಸಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೮೦

ಜೀವನವೇ ನಿಜವಾದ ಪಾಠಶಾಲೆ,
ಶಾಲೆಯಲಿ ಕಲಿತದ್ದು ಮರೆಯಬಹುದು,

ಜೀವನದಿ ಕಲಿತದ್ದು ಮರೆಯಲಾಗದು.
ಸುಖಬಂದಾಗ ಉಬ್ಬದಿರುವದ ಕಲಿ,
ಕಷ್ಟಗಳ ಸುರಿಮಳೆಯಲಿ ಕಲ್ಲಾಗುವದ ಕಲಿ,
ಮನವೆಂಬ ಮರ್ಕಟವ ಪಳಗಿಸುವದ ಕಲಿ,
ನಾಲಿಗೆಯ ಬಿಗಿಹಿಡಿಯುವದ ಕಲಿ,
ನಿನ್ನ ಕಣ್ಣೇನು ನೋಡಬೇಕೆಂಬುದ ಕಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ
ನರಿಯುವ ಪರಿಯನು ಕಲಿ.

೨೮೧

ಸೂರ್ಯ ಚಂದ್ರರಾಚೆಗಿದೆ ಇನ್ನು ವಿಶ್ವ,
ಗ್ರಹತಾರೆಗಳಿಂದಾಚೆಗಿದೆ ಇನ್ನು ವಿಶ್ವ,
ವಿಶ್ವವನ್ನಾವರಿಸಿದೆ ಶೂನ್ಯ,
ಎತ್ತ ನೋಡಿದತ್ತತ್ತ ಶೂನ್ಯವೇ ಶೂನ್ಯ.
ಶೂನ್ಯದಾಚೆಗಿರುವದು ನಿಃಶೂನ್ಯ,
ನಿಃಶೂನ್ಯ ಸರ್ವಶೂನ್ಯ ಮಾತು ಮನಗಳಿಗೆ
ನಿಲುಕದ ಶೂನ್ಯ, ಚಿನ್ಮಯ ಶೂನ್ಯ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನಿನ್ನ ಇನ್ನೊಂದು ಹೆಸರು ಅರಿಯಲಾಗದ ಶೂನ್ಯ!

೨೮೨

ಹೊರಗೆ ಗಾಢಾಂಧಕಾರ,
ಒಳಗೆ ಅನಂತ ಕೋಟಿ ಸೂರ್ಯರ ಬೆಳಕು!
ಹೊರಗೆ ಕಲ್ಪನಾತೀತ ಕನಿಷ್ಟ ತಾಪಮಾನ!
ಒಳಗೆ ಶತಕೋಟಿ ಸೂರ್ಯರ ಉಷ್ಣಮಾನ!
ಹೊರಗೆ ನಿಃಶಬ್ದ ಒಳಗೆ ಶಬ್ದದಾಚೆಯ ಶಬ್ದ!
ಹೊರಗೆ ಜಡ, ಒಳಗೆ ಅನಂತ ಅರಿವು!
ಹೊರಗೆ ಭಾವರಹಿತ, ಒಳಗೆ ಆನಂದಭರಿತ!
ನೀನು ಕಾಣಬಾರದೆಂದು ಅಡಗಿದೆ ನಿಜ,
ನಿನ್ನ ಸೃಷ್ಟಿಯಿಂದಲೇ ನೀನು ಸಿಕ್ಕು ಹಾಕಿಕೊಂಡೆ.
ವಿಜ್ಞಾನಿಗಳ ಪ್ರಪಂಚ ಪ್ರಯೋಗಗಳಿಗೆ ಮಸುಕಾಗಿ ಕಂಡೆ.
ಅನುಭಾವಿಗಳ ಒಳಗಣ್ಣಿಗೆ ಕಾಣಿಸಿಕೊಂಡೆ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ, ನಿನ್ನ
ಸರಸಾಟ ನಡೆಯದಿನ್ನು ನಿನ್ನ ಹುಲುಮಾನವನ ಮುಂದೆ.

೨೮೩

ಕಾಣಿಸದಿರುವ ಹುಡುಗಾಟ ಬಿಡು,
ಇದ್ದಲ್ಲೆಲ್ಲ ಪ್ರಕಟವಾಗಿ ಬಿಡು.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ಮನತುಂಬಿ ಹಾಡುವೆ ನಿನ್ನ ಹಾಡು.

೨೮೪

ಅದು ಒಂದು ಕಾಲವಂತೆ,
ನೀನು ಗುಡಿಗುಂಡಾರಗಳಲ್ಲಿದ್ದೆಯಂತೆ,
ನಿಷ್ಠೆಯಿದ್ದವರಿಗೆ ಕಾಣುತ್ತಿದ್ದೆಯಂತೆ,
ಪೂಜಾರಿಗಳು ನಿನ್ನ ಹೊರಹಾಕಿದರಂತೆ.
ಪಾಪ, ಆಗ ನಿನ್ನಾರನ್ನಾಶ್ರಯಿಸಬೇಕು?
ಸದಾಚಾರಿಗಳ ಹೃದಯಂಗಳೇ ನಿನ್ನ ಮನೆಯಾದವಂತೆ.
ಈಗಲೂ ಅದೇ ನಿನ್ನ ಠಾಣೆಯಂತೆ.
ಅಲ್ಲಿಯೇ ನಿನ್ನ ಕಾಣಬಹುದಂತೆ.
ಇದ ನಂಬದವರಿನ್ನೂ ಇರುವರಂತೆ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ಅವರಿಗೆ ನಿನ್ನ ನಿವಾಸ ತೋರಿಸು ಅಜ್ಞಾನವ ಪರಹರಿಸು.

೨೮೫

ಸಂಗೀತ ಶಾಸ್ತ್ರದಲ್ಲಿ ಸಪ್ತ ಸ್ವರಗಳು,
ವಾರದಲ್ಲೇಳು ದಿನಗಳು,
ಸೂರ್ಯರಶ್ಮಿಯಲ್ಲೇಳು ಬಣ್ಣಗಳು,
ಭಾರತೀಯ ಪರಂಪರೆಯಲ್ಲಿ ಸಪ್ತ ಋಷಿಗಳು,
ಮೆಂಡಲೀಫನ ಮೂಲಾಂಶ ಪಟ್ಟಿಯಲ್ಲಿ
ಏಳು ಗುಂಪುಗಳು
ಮಾನವ ದೇಹದಲ್ಲಿ ಏಳು ಚಕ್ರಗಳು,
ಶಕ್ತಿಯದಿವ್ಯ ಕೇಂದ್ರಗಳಿವು.
ಇವು ಜಾಗೃತವಾಗಲಿ ನಿನ್ನ ರಹಸ್ಯ ಬಯಲಾಗಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೮೬

ಅಮೆರಿಕಾದ ಪಿಜ್ಜಾ ಭಾರತಕ್ಕೆ ಬಂತು.
ಅಮೆರಿಕಾದ ಶಿಸ್ತು ಭಾರತಕ್ಕೆ ಬರಲಿಲ್ಲ.
ಅಮೆರಿಕಾದ ಬುಷ್‌ಷರ್ಟ್ ಭಾರತಕ್ಕೆ ಬಂತು
ಅಲ್ಲಿಯ ವ್ಯಾಪಾರದ ಪ್ರಾಮಾಣಿಕತೆ ಇಲ್ಲಿಗೆ ಬರಲಿಲ್ಲ.
ಭಾರತದ ಯೋಗ ಅಮೆರಿಕಾಕೆ ಹೋಯಿತು.
ಅಮೆರಿಕಾದ ತತ್ವನಿಷ್ಠೆ ಭಾರತಕ್ಕೆ ಬರಲಿಲ್ಲ.
ಅಲ್ಲಿಯ ಚುನಾವಣೆಗಳಲ್ಲಿ ತತ್ವನಿಷ್ಠೆ,
ನಮ್ಮ ಚುನಾವಣೆಗಳಲ್ಲಿ ಮೋಸವಂಚನೆ,
ನಮ್ಮ ಒಳ್ಳೆಯದನ್ನು ಅವರು ಕಲಿತರು,
ಅವರ ಕೆಟ್ಟದ್ದನ್ನು ನಾವು ಕಲಿತೆವು.
ಅಲ್ಲಿಯ ಕೌಟುಂಬಿಕ ಶಿಥಿಲತೆ ಇಲ್ಲಿಗೆ ಬಂದಿದೆ,
ವೃದ್ಧಾಶ್ರಮಗಳಿಲ್ಲಿ ಮೂಡಿ ಬರುತಲಿವೆ.
ಒಳ್ಳೆಯದನ್ನು ನಾವೆಲ್ಲರಿಂದ ಕಲಿಯಬೇಕು.
ನಮ್ಮ ಚಿರಂತನ ಮೌಲ್ಯಗಳ ಬಿಡದಿರಬೇಕು.
ವಿಜ್ಞಾನ ತತ್ವಜ್ಞಾನ, ಅನುಭಾವ ಮಾನವೀಯತೆಯ
ಸಮನ್ವಯವಾಗಬೇಕು, ನಮ್ಮತನ ಉಳಿಸಿಕೊಳ್ಳಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೮೭

ಈ ಸೃಷ್ಟಿಯೊಂದು ಚಕ್ರಗಳ ಸರಮಾಲೆ,
ಜಲಚಕ್ರ, ಜಲಜನಕ ಚಕ್ರ, ಸಾರಜನಕ ಚಕ್ರ, ಆಮ್ಲಜನಕ ಚಕ್ರ,
ಇಂಗಾಲದ ಡೈಆಕ್ಸೈಡ್ ಚಕ್ರ, ರಂಜಕ ಚಕ್ರ,
ಚಕ್ರಗಳಿವು ತಿರುಗುತಲೇ ಇವೆ,
ಜೀವಚಕ್ರ ತಿರುಗುತಲೇ ಇದೆ,
ಸೃಷ್ಟಿ ಪ್ರಳಯಗಳ ಚಕ್ರ ತಿರುಗುತಲೇ ಇದೆ,
ನಿನ್ನ ಲೀಲೆ ನಿರಂತರವಾಗಿ ಚಲಿಸುತ್ತಲೇ ಇದೆ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.
ನಿನ್ನ ಲೀಲೆಗೆ ಕೊನೆಯಿಲ್ಲ ಮೊದಲಿಲ್ಲ.
ಇದರಂತುವ ಬಲ್ಲವರಾರೂ ಇಲ್ಲ.

೨೮೮

ದೇಶ ಯಾವುದಾದರೇನು?
ಧರ್ಮ ಯಾವುದಾದರೇನು?
ಭಾಷೆ ಯಾವುದಾದರೇನು?
ಹೃದಯದ ಭಾಷೆಯೊಂದೇ.
ಸಂಗೀತ ಸಾಹಿತ್ಯವೀ ಭಾಷೆಯನರಿಯಬಲ್ಲದು.
ಹೃದಯದ ಮಿಡಿತವನರಿಯಬಲ್ಲದು.
ಅಂತರಂಗವನರಳಿಸಬಲ್ಲುದು.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನಿನ್ನರಿವ ಮೂಡಿನ ಬಲ್ಲದು.

೨೮೯

ನಕ್ಷತ್ರಗಳು ಸತ್ತವರ ಆತ್ಮಗಳಲ್ಲ,
ಅವು ಉರಿಯುವ ಗೋಲಗಳು.
ಜಲಜನಕನೇ ಅವುಗಳಿಗಿಂಧನ,
ನಕ್ಷತ್ರಗಳು ಹುಟ್ಟುತ್ತವೆ, ಸಾಯುತ್ತವೆ.
ನಮ್ಮ ಸೂರ್ಯನೂ ಒಂದು ನಕ್ಷತ್ರ.
ಸೂರ್ಯರ ಸಂಖ್ಯೆ ಕೊಟ್ಯಾನುಕೋಟಿ.
ಸೂರ್ಯನಿಗಿಂತ ಬಹು ಭಾರವಾದ ನಕ್ಷತ್ರಗಳೂ ಉಂಟು.
ಅವು ಸಾವನ್ನಪ್ಪಿದಾಗ ಕಾಳ ರಂಧ್ರ (Blackhole)ಗಳ ಜನನ,
ಇದೊಂದು ಸೃಷ್ಟಿಯ ಅಗಾಧಕ್ರಿಯೆ, ರಹಸ್ಯಕ್ರಿಯೆ,
ಬೆಳಕೂ ಹೊರಬರದ ಕಾಳರಂಧ್ರಗಳಿಂದ,
ಅವುಗಳ ಗುರುತ್ವಾಕರ್ಷಣಶಕ್ತಿ ಕಲ್ಪನಾತೀತ,
ಅವು ಅಗೋಚರ ಶಕ್ತಿಧಾಮಗಳು.
ಅವುಗಳಿಂದಲೇ ಶ್ವೇತರಂಧ್ರಗಳುದಯ,
ಶ್ವೇತರಂಧ್ರಗಳ ಸ್ಫೋಟದಿಂದಲೇ ನಿಹಾರಿಕೆಗಳ ಜನನವಂತೆ.
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ,
ನಿನ್ನ ಲೀಲೆ ಯಾರಿಗೂ ತಿಳಿಯದಂತೆ!
ಇದಕೆ ಕೊನೆ ಮೊದಲಿಲ್ಲವಂತೆ!
ಇದು ನಿನಗೊಂದು ವಿನೋದವಂತೆ!
ಮಕ್ಕಳು ಪಟಾಕಿ ಹಾರಿಸಿದಂತೆ!

೨೯೦

ಭಾರತ ಅಮೆರಿಕಾಗಳೆರಡೂ ಬೃಹತ್ ರಾಷ್ಟ್ರಗಳು,
ಪ್ರಜಾಪ್ರಭುತ್ವದನಂಟಿವಕ್ಕೆ
ತನ್ನವರನ್ನೆದುರಿಸಿ ಆಯಿತು ಅಮೆರಿಕಾ ಸ್ವತಂತ್ರ.
ಪರಕೀಯರನ್ನಮುರಿಸಿ ಆಯಿತು ಭಾರತ ಸ್ವತಂತ್ರ.
ವಿಶ್ವದ ಅತಿದೊಡ್ಡ ಪ್ರಜಾಪ್ರಭುತ್ವಗಳಿವೆರಡು,
ಸಹಜಮಿತ್ರ ರಾಷ್ಟ್ರಗಳಿವೆರಡು,
ಅಲ್ಲಿಯ ವಿಜ್ಞಾನ, ತಂತ್ರಜ್ಞಾನ, ಉದ್ಯಮಶೀಲತೆ,
ಶಿಸ್ತು ಶ್ರಮಜೀವನ ವಿಧಾನ ಆಮದಾಗಬೇಕಿಲ್ಲಿಗೆ,
ಇಲ್ಲಿಯ ಆಧ್ಯಾತ್ಮ, ಸಾಮಾಜಿಕ ವ್ಯವಸ್ಥೆ,
ಸುಭದ್ರ ಕೌಟುಂಬಿಕ ಜೀವನವಿಧಾನ ರಫ್ತಾಗಬೇಕಲ್ಲಿಗೆ,
ಪರಸ್ಪರ ಬಾಂಧವ್ಯವಿನ್ನೂ ವಿಕಸಿತವಾಗಬೇಕು.
ಪರಸ್ಪರ ವಿಶ್ವಾಸ ಸಹಕಾರ ಸೌಹಾರ್ದತೆಯಿನ್ನೂ ಬೆಳೆಯಬೇಕು.
ಇತರ ರಾಷ್ಟ್ರಗಳಿಗಿವು ಮಾದರಿಯಾಗವುವೇ?
ಇದ ನೀನೆ ಬಲ್ಲೆ ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೯೧

ಸಮಾಜವಾದ ರಷ್ಯಾದಲ್ಲಿ ಮಣ್ಣು ಮುಕ್ಕಿತು,
ಬಸವನ ಆಧ್ಯಾತ್ಮಿಕ ಸಮಾಜವಾದವಿನ್ನೂ ಜೀವಂತ;
ತತ್ವಭೇದಗಳಿದ್ದರೂ ರಷ್ಯಾ ನಮ್ಮ ಹಳೆಯ ಮಿತ್ರ,
ಅವರಿಗೂ ಬೇಕೀಗ ಭಾರತದ ಪ್ರಜಾಪ್ರಭುತ್ವ.
ಇವೆರಡರ ಭಾಂದವ್ಯ ಈಗ ಮತ್ತೆ ನಿಕಟವಾಗಬೇಕು.
ಪರಸ್ಪರ ಹಿತರಕ್ಷಣೆಯಾಗಬೇಕು.
ವಿಶ್ವಶಾಂತಿಗಿದು ಪೂರಕವಾಗಬೇಕು.
ಅಮೆರಿಕಾ ಸಹಕಾರವಿದಕೊದಗಿ ಬರಬೇಕು.
ವಿಶ್ವದಲ್ಲಿ ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ
ರಾಜ್ಯ ಸ್ಥಾಪನೆಯಾಗಬೇಕು.

೨೯೨

ನಿಸರ್ಗವೇ ಮಾನವನ ಆದ್ಯ ಗುರು,
ಕಲಿತ ಪಾಠಗಳೆನಕಿದರಿಂದ;
ಕಲ್ಲು ಕಲ್ಲಿಗೆ ತಿಕ್ಕಿ ಬೆಂಕಿ
ಪಡೆಯುವದ ಕಲಿತ.

ಗಿಡಮರಗಳ ಬೆಳೆಯುವುದ ನೋಡಿ
ಬೆಳೆಯವುದನ್ನು ಕಲಿತ.
ಪ್ರಾಣಿಗಳ ನೋಡಿ ಕುಟುಂಬ ಜೀವಿಯಾದ.
ಇರುವೆಗಳ ನೋಡಿ ಸಮಾಜ ಜೀವಿಯಾದ.
ಹಕ್ಕಿ ಹಾರಾಟ ನೋಡಿ
ವಿಮಾನ ಹಾರಿಸುವದ ಕಲಿತ.
ಇವನ ಆವಿಷ್ಕಾರಗಳೆಲ್ಲ ನಿಸರ್ಗದನುಕರಣೆಗಳು.
ಅದರನುಕರುಣೆಯಿಂದಲೇ
ಇವನಿನ್ನೂ ಮಾನವನಾಗಬೇಕು.
ನಿಸರ್ಗದ ಕೂಸಾಗಿ ದೇವನಾಗಬೇಕು.
ಓ ಮಾನವ ನಿಸರ್ಗಕ್ಕೆ ಹತ್ತಿರವಾಗುವದ ಮರೆಯದಿರು.
ನಿಸರ್ಗವ ದೇವರೆಂಬುದ ಮರೆಯದಿರು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ ಸೇರುವುದ ಮರೆಯದಿರು.

೨೯೩

ನಿಸರ್ಗವ ಹುಟ್ಟಿಸಿದವರಾರು?
ಮೂಲತತ್ವವೇ ನಿಸರ್ಗವಾಯಿತು.
ಮಾನವನ ಸೃಷ್ಟಿಯಾಯಿತು, ಆತನಿಗೆ
ಅದೇ ದೇವರಾಯಿತು.
ತಂದೆ ತಾಯಿ, ಬಂಧು ಬಳಗವಾಯಿತು.
ಎಲೊ ಎಲೊ ಮಾನವ ರಕ್ಷಿಸು ನಿಸರ್ಗವ,
ಆಗು ನೀ ದೇವಮಾನವ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೯೪

ಮತ, ಧರ್ಮವಾಗಬೇಕು
ಜ್ಞಾನ, ಕ್ರಿಯೆಯಾಗಬೇಕು
ಶ್ರದ್ಧೆ, ಭಕ್ತಿಯಾಗಬೇಕು
ಕೆಲಸ, ಕಾಯಕವಾಗಬೇಕು
ವೈಚಾರಿಕತೆ ಒಡಮೂಡಬೇಕು
ನುಡಿ ನಡೆಯಾಗಬೇಕು
ನೀನೆಲ್ಲರಲ್ಲಿ ಪ್ರಕಟವಾಗಬೇಕು

ಭೂಗ್ರಹ ಕೈಲಾಸವಾಗಬೇಕು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೯೫

ಬಲಿಷ್ಠ ರಾಷ್ಟ್ರಗಳಲ್ಲಿ ಮಾರಕಾಸ್ತ್ರಗಳ ಭಂಡಾರ,
ಪರಮಾಣಾಸ್ತ್ರ, ಜಲಜನಕಾಸ್ತ್ರ, ರಾಸಾಯನಿಕಾಸ್ತ್ರ,
ಜೈವಿಕಾಸ್ತ್ರ, ಒಂದೇ ಎರಡೇ ನೂರಾರು ಅಸ್ತ್ರಗಳು,
ನಿನ್ನ ಆತ್ಮಹತ್ಯೆಗಿವೆ ಸಾಕೇ ಮಾನವ?
ಜೀವಿಗಳಿರುವುದು ಭೂಗ್ರಹದಲೊಂದೇ,
ಇವ ನಾಶಮಾಡಲು ಬೇಕೆ ಈ ಅಸ್ತ್ರಗಳು ಮಾನವ?
ಓ ತಿಳಿಗೇಡಿ ಮಾನವ, ನೀನಾಗಬೇಡ ಭಸ್ಮಾಸುರ,
ಓ ಕುಟಿಲ ರಾಜಕಾರಣಿ, ನೀನುಳಿದು ಮಾನವ ಕುಲವನುಳಿಸು,
ನಿನಗಿದು ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ
ಕಿವಿ ಮಾತು.

೨೯೬

ಭಯೋತ್ಪಾದಕತೆ ನಡುಗಿಸಿತು ಬಲಿಷ್ಠ ಅಮೆರಿಕವ.
ಭಯೋತ್ಪಾದಕತೆ ರಕ್ತದೋಕುಳಿಯಾಯಿತು ಕಾಶ್ಮೀರದಲಿ.
ಜಾತಿಯ ಹೆಸರಿನ ಭಯೋತ್ಪಾದಕತೆಯೆ? ಇದು ಏಕೆ?
ಧರ್ಮವೊಂದು ಅಫೀಮು ಎಂದು ಹೇಳಿದ ಕಾರ್ಲ್‌ಮಾರ್ಕ್ಸ್.
ಈ ಅಫೀಮು ತಿಂದರು ಭಯೋತ್ಪಾದಕರು.
ತಿನ್ನುತ್ತಲೇ ಇದ್ದಾರೆ, ರಕ್ತದೋಕುಳಿ ನಡೆಯುತಲೇ ಇದೆ
ಇದರಮಲಿನಲಿ:
ಭಯೋತ್ಪಾದಕತೆಯ ಹುಟ್ಟು ಹಾಕಿದವರೇ ಅದಕೆ
ಬಲಿಯಾಗುತ್ತಿದ್ದಾರಿಂದು.
"ಮಾಡಿದ್ದುಣ್ಣೋ ಮಾರಾಯ" ಎಂಬ ಗಾದೆ ಸುಳ್ಳಾಗಲಿಲ್ಲ.
ಈಗಲಾದರೂ ಕುಟಿಲ ರಾಜಕಾರಣ ಬಿಡಲಿ,
ಶುದ್ಧ ಮನದಿಂದ, ಪ್ರಾಮಾಣಿಕತೆಯಿಂದ
ಇದ ನಿರ್ಮೂಲ ಮಾಡುವ ಶಪಥ ಮಾಡಲಿ,
ಭಯೋತ್ಪಾದಕತೆಯ ವಿರುದ್ಧ ಸಮರ ಯಶಸ್ವಿಯಾಗಲಿ,
ಮತಾಂಧತೆ ತೊಲಗಿ ಧರ್ಮರಾಜ್ಯ ಸ್ಥಾಪನೆಯಾಗಲಿ.
ದಯವೇ ಧರ್ಮದ ಮೂಲವಾಗಲಿ.

ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನೆಲ್ಲರಿಗೂ
ನ್ಯಾಯ ದೂರಕಿಸಿಕೊಡಲಿ.

೨೯೭

ನಮ್ಮ ದೇಶದಲ್ಲಿ ಭಾಷೆಗಳನೇಕ,
ಭಾಷೆಯಾಧಾರದ ಮೇಲೆ ಪ್ರಾಂತಗಳನೇಕ.
ಭಾಷೆಗಳು ಬೇರಾದರೇನು? ಸಾಹಿತ್ಯ ಒಂದೇ.
ಭಾಷೆ ದೇಹ, ಸಾಹಿತ್ಯವದರಾತ್ಮ.
ದೇಹ ಬೇರೆಯಾದರೇನು? ಆತ್ಮ ಒಂದೇ.
ಭಾಷೆಯದುರಭಿಮಾನ ಬೇಡ, ಭಾಷೆಯ
ಹೆಸರಿನಲಿ ಕಚ್ಚಾಟ ಬೇಡ.
ಅಭಿಮಾನವಿರಲಿ ನಿನ್ನ ಭಾಷೆಯಲ್ಲಿ,
ಸಹೋದರ ಭಾವವಿರಲಿ ಪರಭಾಷೆಯಲ್ಲಿ.
ಪರಸ್ಪರ ವಿಚಾರವಿನಿಮಯ ನಡೆಯಲಿ,
ಮಾನವ ಸಂಸ್ಕೃತಿಯ ಭಂಡಾರ ತುಂಬಿ ತುಳುಕಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೯೮

ಎಲೆಕ್ಟ್ರಾನೊಂದು ಕಣವಂತೆ,
ಅಲ್ಲಲ್ಲ ; ಅದೊಂದು ತರಂಗವಂತೆ!
ಅದು ಕಣವೂ ಅಹುದಂತೆ!
ತರಂಗವೂ ಅಹುದಂತೆ!
ಅದರ ಕುಚೇಷ್ಟೆ ತಿಳಿಯದಂತೆ.
ವಿಜ್ಞಾನಿಗಳಿಗದೀಗವೊಂದು ಭೂತವಂತೆ
ನಿನ್ನ ಲೀಲೆ ವಿಜ್ಞಾನಿಗಳಿಗೆ ತಿಳಿಯದಂತೆ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೨೯೯

ಜೀವನವೊಂದು ಅನುಭವಗಳ ಸರಮಾಲೆ,
ಘಟನೆಯೊಂದೊಂದು ಹೊಸ ಅನುಭವಕ್ಕೆ ನಾಂದಿ.
ನಿನ್ನ ಸ್ವರೂಪದರ್ಶನವೇ ನಿಜವಾದ ಅನುಭವ.
ಇದೊಂದು ಅಧ್ಯಾತ್ಮಿಕ ಅನುಭವ, ಇದೇ ಅನುಭಾವ.
ಗೋಷ್ಠಿಯಿಂದ ಅನುಭಾವವಳವಡದು.

ಅದನನುಭವಿಸಿಯೇ ಅರಿಯಬೇಕು.
ಅದು ಮಾತುಮನಂಗಳಿಂದತ್ತತ್ತ,
ಅದು ಶಿಶುಕಂಡ ಕನಸಿನಂತೆ.
ಶಬ್ದಜಾಲಕೆ ಸಿಕ್ಕುವದು ಅದರ ಛಾಯೆಮಾತ್ರ.
ನಿನ್ನ ನಿಜಸ್ವರೂಪದರ್ಶನವಾದಾಗ,
ತನ್ನನ್ನು ತಾನು ಮರೆತಾಗ,
ತಾನೇ ನೀನಾದಾಗ ನಿನ್ನರಿವು ಸನ್ನಿಹಿತ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೦೦

ಮಾತನಾಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು.
ಒಡೆದ ಮುತ್ತು ಮುತ್ತಾಗದು ಮತ್ತೆ, ಆಡಿದ ಮಾತು ಹಿಂದಿರುಗದು.
ಮರ್ಮವರಿತು ಮಾತನಾಡಬೇಕು,
ಆಡಿದ ಮಾತೇ ಮುತ್ತಾಗಬೇಕು,
ಮಾತು ಪರರ ನೋಯಿಸದಂತಿರಬೇಕು
ಮಾತೇ ಪರಂಜ್ಯೋತಿಯಾಗಬೇಕು.
ಮಾತೇ ಶಬ್ದಬ್ರಹ್ಮವಾಗಬೇಕು.
ನೀನೂ ಒಂದು ಮಾತಲ್ಲವೇ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೦೧

ರಸಿಕತೆಯೇ ಜೀವನ ರಸಾಯನ,
ರಸಿಕನಾಡಿದ ಮಾತು ಅಮೃತವ ಸವಿದಂತೆ,
ರಸಿಕತೆಯಿಲ್ಲದ ಬಾಳು ಬರಡು ಬಾಳು.
ರಸಿತಕೆಗೆ ಬೇಕು ಸತ್ಯದ ಮೆರಗು,
ಆಧ್ಯಾತ್ಮದ ಮೆರಗು,
ರಸಿಕನಾದರೆ 'ಸರ್ವಜ್ಞ'ನಂತಾಗಬೇಕು.
ರಸಿಕತೆಯಲ್ಲಿ ಜೀವನದರ್ಶನ ಮೂಡಿಬರಬೇಕು.
ನೀನು ಪ್ರಸನ್ನನಾಗಬೇಕು
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೦೨

ಮೂಡಿಬಂದಿತು ದಾಸೋಹದ ಪರಿಕಲ್ಪನೆ
ಅನುಭವ ಮಂಟಪದಲ್ಲಿ.

ಅನ್ನ ದಾಸೋಹ, ತನು ದಾಸೋಹ, ಮನ ದಾಸೋಹ,
ಧನ ದಾಸೋಹ, ಜ್ಞಾನ ದಾಸೋಹ, ವಿಜ್ಞಾನ ದಾಸೋಹ
ನಿಸ್ವಾರ್ಥ ಸೇವೆಯೆಲ್ಲವೂ ದಾಸೋಹವೇ.
ಕೊಡಬೇಕು, ಕೊಡದಂತಿರಬೇಕು
ಇದೇ ದಾಸೋಹ, ದಾಸೋಹಂಭಾವವಿದರ
ಮೂಲಸೂತ್ರ, ಶರಣಧರ್ಮದ ಸೂತ್ರ.
ನಡೆಯಿತು ಜ್ಞಾನ ದಾಸೋಹ ಅನುಭವಮಂಟಪದಲ್ಲಿ ಅಂದು,
ನಡೆಯಿತನ್ನ ದಾಸೋಹ ಮಹಾಮನೆಯಲ್ಲಿ ಅಂದು,
ದಾಸೋಹ ತತ್ವಕ್ಕೆ ಮಾದರಿ ಈ ದಾಸೋಹಗಳು.
ಇಂದೂ ಉಳಿದಿದೆ ಈ ತತ್ವ ನಮ್ಮ ಮಠಗಳಲ್ಲಿ.
ಅನ್ನ ದಾಸೋಹ, ಜ್ಞಾನ ದಾಸೋಹ ನಡೆದಿದೆ
ಅವ್ಯಾಹತವಾಗಿ, ಶರಣರು ಹಚ್ಚಿದೀ ದೀಪ ಆರಲಿಲ್ಲ.
ವಿಶ್ವವಿದ್ಯಾಲಯಗಳು ಮಾಡದ ಕೆಲಸ ನಮ್ಮ ಮಠಗಳಿಂದ
ನಡೆದಿದೆ ಇಂದು, ಲಕ್ಷಾಂತರ ವಿದ್ಯಾರ್ಥಿಗಳಿಗೆ
ಜ್ಞಾನದಾಸೋಹ, ಲೆಕ್ಕವಿಲ್ಲದಷ್ಟು ಜನರಿಗೆ ಅನ್ನ ದಾಸೋಹ,
ಧನ್ಯ ಬಸವಣ್ಣ! ನೀನೇ ಧನ್ಯ! ನಿನ್ನೀ ತತ್ವಗಳ ಪಾಲಿಸುವ
ಮಠಗಳೂ ಧನ್ಯ! ಇಡೀ ವಿಶ್ವಕ್ಕೆ ಮಾದರಿ, ನೀ ತೋರಿದ
ದಾರಿ, ಮಠಗಳಿಂದು ಅನುಸರಿಸುತ್ತಿರುವ ದಾರಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನೊಲಿಸುವ ದಾರಿ.

೩೦೩

ಲಂಚ ತಿನ್ನುವರು, ಹಣ ಗಳಿಸುವರು,
ವರದಕ್ಷಿಣೆ ಕೊಟ್ಟು ಮದುವೆ ಮಾಡುವರು,
ದುಂದುವೆಚ್ಚದ ಅದ್ದೂರಿ ಮದುವೆ ಮಾಡುವರು,
ಪರೀಕ್ಷೆಯಲ್ಲಿ ಪಾಸು ಮಾಡಿಸಲು ಲಂಚ,
ನೌಕರಿ ಕೊಡಿಸಲು ಕೊಡುವರು ಲಂಚ.
ಇವರಿಗೆ ಲಂಚ ಹಾಸಲುಂಟು ಹೊದೆಯಲುಂಟು.
ಆತ್ಮವಂಚನೆಯ ದಾರಿ ಇವರಿಗುಂಟು,
ಲಂಚ ಕೊಡುವುದು ಮೊದಲನೆಯ ಪಾತಕ,
ಲಂಚ ಪಡೆಯುವುದು ಎರಡನೆಯ ಪಾತಕ,
ಅದ್ದೂರಿಯ ಮದುವೆ ಮಾಡುವುದು ಮೂರನೆಯ ಪಾತಕ,
ವರದಕ್ಷಿಣೆ ಕೊಡುವುದು ಮಹಾಪಾತಕ.
ಲಂಚ ಕೊಡುವವರಿಗೆ ಪಡೆವವರಿಗೆ ರೌರವ ನರಕ,

ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರಿವರ
ಮೂಗ ಕೊಯ್ಯದೆಮಾಣ್ಬನೆ?

೩೦೪

ಕರ್ನಾಟಕ ರಾಜ್ಯಕಿಂದು ನಾಲ್ವತ್ತೈದು ವರ್ಷ
ತುಂಬುತ್ತ ಬಂತು.
ಕನ್ನಡತನವಿನ್ನೂ ಬೆಳೆಯಲೇ ಇಲ್ಲ.
ಉತ್ತರದವರು ಹಳೆಯ ಮೈಸೂರಿನವರೆಂಬ
ಭೇದಭಾವವಿನ್ನೂ ಅಳಿಯಲಿಲ್ಲ.
ಭಾವೈಕ್ಯತೆ ಮೂಡಿಬರಲಿಲ್ಲ.
ಉತ್ತರ ಕರ್ನಾಟಕ ಬೆಳೆಯಲಿಲ್ಲ.
ಅಲ್ಲಿಯವರೇ ಮುಖ್ಯಮಂತ್ರಿಗಳಾದರೂ
ಇದರ ಗೋಳು ತೀರಲಿಲ್ಲ.
ದಕ್ಷಿಣದವರಿದಕೆ ಕಾರಣವೆಂಬ ಕೂಗು.
ಉತ್ತರದ್ದೇ ಬೇರೆ ರಾಜ್ಯವಾಗವೆಂಬ ಕೂಗು
ಈ ಭೇದ ಅಳಿಯುವದೆ?
ಈ ರಾಜ್ಯ ಉಳಿಯುವದೆ?
ಇದ ನೀನೆ ಬಲ್ಲೆ ಇಷ್ಟಲಿಂಗರೂಪಿ
ಹಂಪೆಯ ವಿರೂಪಾಕ್ಷೇಶ್ವರ.

೩೦೫

ಹಣವೇ ನಿನ್ನ ಗುವನೆನಿತೆಂದು ವರ್ಣಿಸಲಿ!
ನಿನಗೆ ಹೆಣವೂ ಬಾಯಿ ತೆಗೆಯುದಂತೆ!
ಹಣದಾಸೆಗಿಂದು ಭ್ರಷ್ಟಾಚಾರದ ತಾಂಡವ,
ಹಣ ಕೊಟ್ಟು ಓಟುಗಳ ಖರೀದಿ,
ಹಣ ಕೊಟ್ಟು ಶಾಲೆ ಕಾಲೇಜುಗಳಲ್ಲಿ ಸೀಟು ಖರೀದಿ!
ಹಣ ಕೊಟ್ಟು ನೌಕರಿ ಖರೀದಿ.
ಹಣ ಕೊಟ್ಟು ನೌಕರಿ ಬಡ್ತಿ ಖರೀದಿ,
ಹಣ ಕೊಟ್ಟು ಮದುವೆಯ ಗಂಡು ಖರೀದಿ
ಇಂಥ ಖರೀದಿಗಳನ್ನೆಷ್ಟು? ಲೆಕ್ಕವಿಲ್ಲದಷ್ಟು,
ಭ್ರಷ್ಟಾಚಾರ, ನಮಗದನ್ನು ಬಿಡದಪಟ್ಟು,
ದೂರವಾದೀತೇ ಈ ಪಿಡುಗು ನಮ್ಮಿಂದ?

ಬೇಕಾದೀತೆ ಇದಕೊಂದು ವೀರಭದ್ರಾವತಾರ?
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ,
ನಿನ್ನ ತಾಂಡವ ನೃತ್ಯ ನಡೆಯಲಿ,
ಇದು ಹೇಳ ಹೆಸರಿಲ್ಲವಾಗಲಿ.

೩೦೬

ಓಡಿಸೀತೆ ಹಸಿದವನಿಗಾಧ್ಯಾತ್ಮ?
ಅವನಿಗಾಹಾರವೇ ದೇವರು.
ಹಸಿದವರಿಗೆ ಉಣಬಡಿಸಬೇಕು,
ನಿರುದ್ಯೋಗಿಗಳಿಗೆ ಕೆಲಸ ಕೊಡಬೇಕು,
ಕಾಯಕವನವರಿಗೆ ಕಲಿಸಬೇಕು,
ಕಾಯಕವನವರು ಮಾಡುವಂತಾಗಬೇಕು,
ಅವರ ಹಸಿವ ಹಿಂಗಿಸಬೇಕು,
ಅವರೂ ಗಳಿಸುವಂತಾಗಬೇಕು,
ಇತರರಿಗೆ ಉಣಿಸುವಂತಾಗಬೇಕು,
ಕಾಯಕ ದಾಸೋಹವನಾಚರಿಸುವಂತಾಗಬೇಕು,
ಅಧ್ಯಾತ್ಮದ ದಾರಿ ತುಳಿಯುವಂತಾಗಬೇಕು,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ,
ಇಹಪರವನ್ನವರು ಸಾಧಿಸುವಂತಾಗಬೇಕು.

೩೦೭

ಮನೆಯೇ ಮೊದಲ ಪಾಠ ಶಾಲೆ,
ಶಿಕ್ಷಣವಿಲ್ಲಿಂದಲೇ ಪ್ರಾರಂಭ.
ತಂದೆತಾಯಿಗಳೇ ಮೊದಲ ಶಿಕ್ಷಕರು
ಅವರ ನಡೆನುಡಿಯೇ ಮಕ್ಕಳಿಗೆ
ಹೇಳಿಕೊಡುವ ಪಾಠವಲ್ಲವೆ?
ತಾವು ಸುಸಂಸ್ಕೃತರಾಗಲಿ,
ಮಕ್ಕಳಿಗೆ ಪಾಠ ಹೇಳಿಕೊಡಲಿ.
ಮನೆಯೊಂದೊಂದು ಮಠವಾಗಿರಲಿ,
ಧರ್ಮ ಉಳಿಯಲಿ, ಬೆಳೆಯಲಿ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ
ನಿನ್ನಮುಡಿಗೆಲ್ಲರು ಹುಲ್ಲತಾರದೆ ಹೂವತಾರಲಿ.

೩೦೮

ನೀನಾರೆಂಬುದ ತಿಳಿದು ನೋಡು,
ನಿನ್ನಂತರಂಗವ ಶೋಧಿಸಿ ನೋಡು,
ಅಲ್ಲಿ ಮನೆ ಮಾಡಿರುವ ದುರ್ಗುಣಗಳ ನೋಡು,
ಅವುಗಳ ಹೊರದೂಡುವ ಶಪಥ ಮಾಡು,
ಸಜ್ಜನರ ಸಂಗ ಮಾಡು,
ಸಮತೆ ಸದಾಚಾರದಲೋಲಾಡು.
ಆಗಾಗುವೆ ನೀನು ಸುಖಸಮೃದ್ಧಿಯ ಬೀಡು,
ದಿವ್ಯತೆಯ ಬೀಡು,
ನಮ್ಮ ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರನ ಕೂಡು.

೩೦೯

ಬಾಳಬಂಡಿಯಲ್ಲಿ ನಮ್ಮಿರ್ವರ ಪಯಣ,
ಅವಳಿಲ್ಲವೀಗ ಬಾಳ ಬಂಡಿಯಲ್ಲಿ.
ದೇಹವಿಲ್ಲದಿದ್ದರೇನು?
ಅವಳಾತ್ಮವಿದೆ ನನ್ನ ಜೊತೆ.
ಆತ್ಮಗಳೆರಡು ಬೆರೆಯಬೇಕಿನ್ನು ಪರಮಾತ್ಮನಲ್ಲಿ,
ಆತ್ಮ ಪಕ್ಷಿಗಳೆರೆಡು ನಿನ್ನಾಣತಿಗೆ ಕಾದಿವೆ,
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೧೦

ಕಾಯವೆಂಬ ಹೊಲನ ಹಸನ ಮಾಡು,
ಶಿವತತ್ವ ಬೀಜವ ಬಿತ್ತದರಲ್ಲಿ,
ಸದಾಚಾರಗಳ ಜಲವನುಣಿಸು,
ಸುಜ್ಞಾನವೆಂಬ ಬೆಳಕು ಪಸರಿಸಲಲ್ಲಿ
ಸದ್ಭಕ್ತಿಯ ಗೊಬ್ಬರ ಹಾಕು
ಶಿವದ ಬೆಳೆ ಬೆಳೆಯಲಿ.
ಮುಕ್ತಿ ಧಾನ್ಯ ಪ್ರಾಪ್ತಿಯಾಗಲಿ
ನಿನಗಾರೋಗಣೆಯಾಗಲಿ
ಇಷ್ಟಲಿಂಗರೂಪಿ ಹಂಪೆಯ ವಿರೂಪಾಕ್ಷೇಶ್ವರ.

೩೧೧

ಅಂತರಂಗದ ಜ್ಞಾನವೇ ಶಿವಜ್ಞಾನ.
ಸಕಲ ಜೀವಾತ್ಮರ ಹಿತಚಿಂತನೆಯೇ ಶಿವಭಕ್ತಿ.
ದಿವ್ಯಧ್ಯಾನವೇ ಶಿವಧ್ಯಾನ.
ಸತ್ಯವ್ರತವೇ ಶಿವವ್ರತ.
ಕಾಯಕವೇ ಶಿವಪೂಜೆ,
ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ
ಶಿವಪೂಜೆ, ಇದು ಶಿವಯೋಗವಯ್ಯಾ
ಉಭಯ ಭೇದವಳಿಯುವ
ರಹಸ್ಯವಿದಯ್ಯಾ, ಇಷ್ಟಲಿಂಗರೂಪಿ
ಹಂಪೆಯ ವಿರೂಪಾಕ್ಷೇಶ್ವರ.



# ವಚನಗಳ ವಿಷಯ ವರ್ಗೀಕರಣ ಸೂಚಿ

## ಧರ್ಮ-ಅನುಭಾವ-ನೀತಿ

**ವಚನಗಳ ಸಂಖ್ಯೆ**

೨,೩,೫,೧೦,೧೪,೧೫,೧೬,೧೭,೧೮,೧೯,೨೦,೨೧,೨೨,೨೩,೨೪, ೨೫,೨೬,೨೭,೨೮,೩೧,೩೨,೩೫,೪೨,೪೪,೪೬,೪೭,೫೦,೫೩,೫೭,೬೦, ೬೯,೭೦,೭೧,೭೨,೭೭,೭೯,೮೨,೮೩,೮೫,೮೬,೧೦೧,೧೦೨,೧೦೩, ೧೦೪,೧೦೫,೧೦೬,೧೦೭,೧೦೮,೧೦೯,೧೧೦,೧೧೪,೧೧೭,೧೧೮,೧೨೩, ೧೨೭,೧೨೮,೧೩೫,೧೩೮,೧೩೯,೧೪೦,೧೪೩,೧೪೪,೧೪೫,೧೪೬,೧೪೭, ೧೫೧,೧೫೫,೧೫೮,೧೫೯,೧೭೨,೧೭೩,೧೭೪,೧೭೯,೧೮೦,೧೮೮, ೧೯೫,೧೯೬,೧೯೯,೨೦೦,೨೦೨,೨೦೩,೨೦೪,೨೦೫,೨೦೬,೨೦೭, ೨೧೬,೨೧೮,೨೨೨,೨೨೩,೨೨೪,೨೨೫,೨೨೬,೨೨೭,೨೩೧,೨೩೨, ೨೩೩,೨೩೪,೨೩೫,೨೪೨,೨೪೪,೨೪೫,೨೪೬,೨೪೭,೨೪೮,೨೫೦, ೨೫೧,೨೫೨,೨೫೫,೨೫೭,೨೫೭,೨೭೯,೨೮೧,೨೮೨,೨೮೪,೨೮೫, ೨೯೪,೨೯೯,೩೦೦,೩೦೫,೩೦೭,೩೦೯,೩೧೦,೩೧೧,೩೩೨,೩೩೩,೩೩೬

## ವಿಜ್ಞಾನ-ತತ್ವಜ್ಞಾನ-ಆಧ್ಯಾತ್ಮ

೧,೪,೭,೮,೯,೧೦,೧೨,೨೯,೩೦,೩೩,೩೪,೩೮,೩೯,೪೦,೪೧, ೪೩,೪೪,೫೧,೫೨,೫೪,೫೫,೫೬,೫೮,೫೯,೬೧,೬೨,೭೩,೭೮,೮೭, ೮೮,೮೯,೯೧,೯೨,೯೩,೯೫,೯೯,೧೩೨,೧೩೩,೧೩೪,೧೩೬,೧೩೭,೧೪೩, ೧೪೮,೧೪೯,೧೫೩,೧೫೭,೧೬೯,೨೦೮,೨೧೨,೨೧೩,೨೧೫,೨೧೯,೨೨೦, ೨೨೧,೨೨೮,೨೩೭,೨೩೮,೨೩೯,೨೪೦,೨೪೧,೨೪೩,೨೫೦,೨೫೩, ೨೫೪,೨೬೩,೨೮೭,೨೮೯,೨೯೨,೨೯೩,೨೯೮

## ಶಿಕ್ಷಣ-ಸಾಹಿತ್ಯ-ಸಂಸ್ಕೃತಿ

೧೩,೩೭,೪೮,೬೪,೬೫,೬೮,೯೭,೯೮,೧೧೨,೧೧೬,೧೨೪,೧೨೫,೧೨೬, ೧೪೧,೧೪೨,೧೫೦,೧೬೨,೧೬೪,೧೬೫,೧೮೫,೧೮೬,೧೮೯,೧೯೦, ೧೯೧,೧೯೩,೨೧೦,೨೧೧,೨೩೬,೨೪೯,೨೬೪,೨೬೫,೨೬೬,೨೬೮, ೨೭೩,೨೮೦,೩೦೧

## ಕುಟುಂಬ-ಸಮಾಜ, ನಾಡು-ನುಡಿ, ದೇಶ-ರಾಜಕರಣ

೬,೩೬,೩೯,೪೫,೬೩,೬೬,೬೭,೭೪,೭೫,೭೬,೮೦,೮೧,೮೪,೯೪,೯೬, ೧೦೦,೧೧೧,೧೧೩,೧೧೫,೧೧೯,೧೨೦,೧೨೫,೧೩೦,೧೩೧,೧೫೨,೧೫೪, ೧೫೬,೧೬೦,೧೬೧,೧೬೩,೧೬೬,೧೬೭,೧೬೮,೧೭೦,೧೭೧,೧೮೧, ೧೮೩,೧೮೪,೧೮೭,೧೯೨,೧೯೪,೧೯೮,೨೦೯,೨೧೪,೨೨೯,೨೩೦, ೨೫೬,೨೫೮,೨೫೯,೨೬೦,೨೬೧,೨೬೨,೨೬೯,೨೭೦,೨೭೪,೨೭೫, ೨೭೬,೨೭೭,೨೭೮,೨೯೦,೨೯೧,೨೯೫,೨೯೬,೨೯೭,೩೦೪,೩೦೭.

## ಇದೇ ಲೇಖಕರ ಇತರ ಕೃತಿಗಳು

೧. ನಿತ್ಯಜೀವನದಲ್ಲಿ ರಸಾಯನ ಶಾಸ್ತ್ರ, ಪ್ರ. ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೫೮,೧೯೬೪,೧೯೬೯.

೨. ಶರಣತತ್ವ ವಿವೇಚನೆ-೧, ಪ್ರ. ಬಸವ ಸಮಿತಿ, ಬೆಂಗಳೂರು, ೧೯೯೩, ೧೯೯೫.

೩. ನಾ ಕಂಡ ಅಮೇರಿಕ, ಪ್ರ. ಬಸವ ಸಮಿತಿ, ಬೆಂಗಳೂರು, ೧೯೯೬.

೪. ವಿಜ್ಞಾನ ದಾಸೋಹ, ಪ್ರ. ಬಸವ ಸಮಿತಿ, ಬೆಂಗಳೂರು, ೧೯೯೮.

೫. ಶರಣತತ್ವ ವಿವೇಚನೆ-೨, ಪ್ರ. ಬಸವ ಸಮಿತಿ, ಬೆಂಗಳೂರು, ೧೯೯೯.

೬. ವೀರಶೈವ ಪಾರಿಭಾಷಿಕ ಪದಕೋಶ, ಡಾ. ಎಸ್. ವಿದ್ಯಾಶಂಕರ ಅವರೊಂದಿಗೆ ಸಂಪಾದನೆ, ಪ್ರ. ಬಸವ ಸಮಿತಿ, ಬೆಂಗಳೂರು, ೨೦೦೦.

೭. ನೈಜಾಂ ಕಾಲದ ಶಿಕ್ಷಣ ಪದ್ಧತಿ, ಪ್ರ. ನವೋದಯ ಪ್ರಕಾಶನ, ವಿಜಯನಗರ ೨ನೇ ಹಂತ, ಬೆಂಗಳೂರು-೪೦, ೨೦೦೦.

೮. ನನ್ನ ಸಿಂಗಾಪೂರ ಮತ್ತು ಆಸ್ಟ್ರೇಲಿಯಾ ಪ್ರವಾಸದ ಅನುಭವಗಳು, ಪ್ರ. ನವೋದಯ ಪ್ರಕಾಶನ, ವಿಜಯನಗರ ೨ನೇ ಹಂತ, ಬೆಂಗಳೂರು-೪೦, ೨೦೦೦.

೯. ವಿಶ್ವಜ್ಯೋತಿ ಬಸವಣ್ಣ, ಡಾ. ಎಸ್. ವಿದ್ಯಾಶಂಕರ ಹಾಗೂ ಶ್ರೀ ಟಿ.ಆರ್. ಮಹಾದೇವಯ್ಯನವರ ಜೊತೆಗೆ ಸಂರಚನೆ, ಪ್ರ. ಬಸವ ಸಮಿತಿ, ಬೆಂಗಳೂರು, ೨೦೦೦.

೧೦. The Discussion of Anubhava Mantapa, Pub. Basava Samithi, Bangalore, 1993.

೧೧. Basava and teachings, Pub. Basava Samithi, Bangalore, 1994.

೧೨. Vijnana Dasoha, Pub. Basava Samithi, Bangalore, 2000.

೧೩. Sharanas' Devine Revolution, Pub. Basava Samithi, 2001.

ಹಂಪೆಯ
# ವಿರೂಪಾಕ್ಷೇಶ್ವರ ವಚನಗಳು



## ಪ್ರೊ|| ಬಿ. ವಿರೂಪಾಕ್ಷಪ್ಪ

ಪ್ರೊ. ಬಿ. ವಿರೂಪಾಕ್ಷಪ್ಪನವರು ಕುರಿತೋದಿದ ವಿಷಯ ರಸಾಯನ ಶಾಸ್ತ್ರವಾದರೂ ಇವರಿಗೆ ಅಧ್ಯಾತ್ಮ ತತ್ವಜ್ಞಾನ ಹಾಗೂ ಸಾಹಿತ್ಯದಲ್ಲಿ ಅಭಿರುಚಿ. ಇವರು ಅನುಭಾವವನ್ನು, ಆಧ್ಯಾತ್ಮವನ್ನು ವೈಜ್ಞಾನಿಕ ಹಿನ್ನಲೆಯಲ್ಲಿ ನೋಡುವುದೊಂದು ವೈಶಿಷ್ಟ್ಯ. ಇವರು ಹದಿನೈದು ವರ್ಷಗಳಿಂದ ಬಸವ ಪಥಕ್ಕೆ ಸತತವಾಗಿ ಬರೆದ ಸಂಪಾದಕೀಯಗಳು ಜನಮೆಚ್ಚುಗೆ ಪಡೆದಿವೆ. ಇವರು ಈ ದಿಶೆಯಲ್ಲಿ ಕೆಲವು ಗ್ರಂಥಗಳನ್ನು ಬರೆದು ಹೊಸದೊಂದು ಹಾದಿ ತುಳಿದಿದ್ದಾರೆ.

ಇವರ ಪ್ರವಾಸ ಕಥನಗಳು ಇವರ ಜೀವನಾನುಭವ, ಅಧ್ಯಯನದ ವಿಶಾಲ ವ್ಯಾಪ್ತಿಗೆ ದ್ಯೋತಕವಾಗಿದೆ. ಇವರು ಬರಹಗಾರರಾಗಿ ಸರಳ ಸುಂದರ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಹೇಳುವ ಮಾತು ನೇರವಾಗಿ ಓದುಗರ ಮನಸ್ಸಿಗೆ ಅಚ್ಚೊತ್ತುವಂತೆ ಹೇಳುವ ಕಲೆ ಇವರಿಗೆ ಸಿದ್ಧಿಸಿದೆ.

ಇವರ ವಚನ ಸಾಹಿತ್ಯದ ಆಳವಾದ ಅಧ್ಯಯನ ಮತ್ತು ಚಿಂತನಗಳು ಇವರನ್ನು ವಚನ ರಚನೆಯತ್ತ ಸೆಳೆದಿವೆ. "ಹಂಪೆಯ ವಿರೂಪಾಕ್ಷೇಶ್ವರ ವಚನಗಳು" ಈ ದಿಶೆಯಲ್ಲಿ ಇವರ ಚೊಚ್ಚಲ ಕೃತಿಯಾದರೂ ಇವರಲ್ಲಿ ವಿಚಾರಗಳ ಪ್ರಖರತೆ, ಅಧ್ಯಯನ ವಿಶಾಲವ್ಯಾಪ್ತಿ, ಬಹುಶ್ರುತತ್ವ ಹಾಗೂ ಅನುಭಾವದ ಹೊಳಹುಗಳನ್ನು ಇವುಗಳಲ್ಲಿ ಕಾಣಬಹುದಾಗಿದೆ. ಆಧ್ಯಾತ್ಮ ವಿಜ್ಞಾನ, ತತ್ವಜ್ಞಾನ, ಶಿಕ್ಷಣ, ಜೀವನದ ವಿವಿಧ ಮುಖಗಳು, ನಾಡು, ನುಡಿ, ದೇಶ, ಸಂಸ್ಕೃತಿ ಈ ಕುರಿತ ವಿಚಾರಗಳು ಇವರ ವಚನಗಳಲ್ಲಿ ಸುಟವಾಗಿ ಅಭಿವ್ಯಕ್ತಿ ಪಡೆದುಕೊಂಡು ಓದುಗರ ಮನಸೆಳೆಯುತ್ತ ಆಧುನಿಕ ವಚನ ಸಾಹಿತ್ಯದಲ್ಲಿ ಇದೊಂದು ಹೊಸ ದಿ ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ.